# ಸಿದ್ಧಗಂಗಾ



ಸೆಪ್ಟೆಂಬರ್, ೧೯೭೮

## 'ಸಿದ್ಧಗಂಗಾ' ಚಿರಾಯುವಾಗಲೆಂದು

### ಹರಸಿ ಹಾರೈಸಿರುವ ಆಜೀವ ಸದಸ್ಯರ ಬಳಗ

479 ಶ್ರೀ ಆರ್. ಜಿ. ಶಿವಣ್ಣ. ಶಿಕ್ಷಕರು,
ರಂಗೇನಹಳ್ಳಿ,
ಮಾಗಡಿ ತಾ||
ಬೆಂಗಳೂರು ಜಿಲ್ಲೆ

480 ಶ್ರೀ ಹೆಚ್. ಎಸ್. ಜಯದೇವಪ್ಪ
ಸಿದ್ಧಗಂಗಾ ಶಿಕ್ಷಣ ಶಾಲೆ,
ತುಮಕೂರು.

481 ಶ್ರೀ ಬಿ. ಕೆ ಶಿವಣ್ಣ
S/o ಶ್ರೀ ಬಿ. ಕಂಬಣ್ಣ.
ಬಿಳಿಗೆರೆ, ತಿಪಟೂರು ತಾ
ತುಮಕೂರು ಜಿಲ್ಲೆ.

482 ಶ್ರೀ ಕೆ. ಎಸ್. ವೆಂಕಟಸುಬ್ಬಯ್ಯ
ಕಿತ್ತೂರು, ಪಿರಿಯಾಪಟ್ಟಣ ತಾ
ಮೈಸೂರು ಜಿಲ್ಲೆ.

483 ಶ್ರೀ ಹೆಚ್. ಮಲ್ಲೇದೇವರು
S/o ಶ್ರೀ ಮಹಾಂತ ದೇವರು
ಮಲ್ಲೇನಹಳ್ಳಿ, ಎಳಂದೂರು ತಾ
ಮೈಸೂರು ಜಿಲ್ಲೆ.

845 ಶ್ರೀ ಎಂ. ಶಿವಣ್ಣ.
ರಾಜಾಜಿನಗರ,
ಬೆಂಗಳೂರು-10

486 ಶ್ರೀ ಬಿ. ರಾಮಣ್ಣ ಹೆಗ್ಗಡೆ
ರಾಜಾಜಿನಗರ.
ಬೆಂಗಳೂರು-10

487 ಶ್ರೀ ಹೆಂಜಯ್ಯ ಸೆಟ್ಟಿ
4ನೇ ಬ್ಲಾಕ್,
ರಾಜಾಜಿನಗರ,
ಬೆಂಗಳೂರು-10

488 ಶ್ರೀ ಕೆ. ಎಂ. ಸಿದ್ದಲಿಂಗಪ್ಪ
ಕುಂಕುಮನಹಳ್ಳಿ.
ತುಮಕೂರು ತಾ||

489 ಶ್ರೀ ಶಿವಪ್ರಸಾದ್,
S/o ಶ್ರೀ ಸೋಲೂರು ಸಿದ್ದಪ್ಪ
ಚಾಮರಾಜಪೇಟೆ,
ಬೆಂಗಳೂರು-18

---

## ಹಳೆಯ ವಿದ್ಯಾರ್ಥಿ ಸಂಘ

ಶ್ರೀ ಸಿದ್ಧಗಂಗಾ ಗುರುಕುಲ, ತುಮಕೂರು ಜಿಲ್ಲಾ.

ನಮ್ಮ ಸಂಘದ ಸರ್ವ ಸದಸ್ಯರ ಸಭೆಯನ್ನು ತಾ|| 14-10-1978 ರ ಶನಿವಾರ ಬೆಳಿಗ್ಗೆ 10 ಘಂಟೆಗೆ ಸಮಾವೇಶಗೊಳ್ಳಲು ಪೂಜ್ಯಪಾದರ ಅಪ್ಪಣೆಯ ಮೇರೆಗೆ ತೀರ್ಮಾನಿಸಲಾಗಿದೆ.

ಈ ಅಧಿವೇಶನದಲ್ಲಿ ಪೂಜ್ಯಪಾದರ ಬಗೆಗೆ ಒಂದು ರಾಷ್ಟ್ರೀಯ ಮಟ್ಟದ ಅಭ್ಯಾಸಪೂರ್ಣ ಮಹತ್ವದ ಅಭಿನಂದನ ಗ್ರಂಥವನ್ನು ಸಮರ್ಪಿಸುವ ವಿಷಯವನ್ನು ಚರ್ಚಿಸಬೇಕಾಗಿದೆ. ತಮ್ಮೆಲ್ಲರ ಅನುಭವಪೂರ್ಣ ಅಭಿಪ್ರಾಯದ ಅವಶ್ಯಕತೆಯಿದೆ. ತಪ್ಪದೆ ಆಗಮಿಸಬೇಕಾಗಿ ವಿನಂತಿ.

ಇತಿ ತಮ್ಮವ,
ಎಂ. ಎಲ್. ಚನ್ನಬಸಪ್ಪ.
ಪ್ರಧಾನ ಕಾರ್ಯದರ್ಶಿ.



# ಶ್ರೀವಾಣಿ

ಮಾನವ ಜನಾಂಗದ ಸಾಧನೆಯಲ್ಲಿ 'ಮಾತು' ಮಹಾಶಕ್ತಿಯುಳ್ಳದ್ದು. ಅದು ಮಾನವನ ಅಂತರಂಗಶಕ್ತಿ ಮತ್ತು ಸಂಸ್ಕೃತಿಯ ಅಳತೆಗೋಲು. ಅದು ಅರಿವಂಗೆ ಅಡಿಗಲ್ಲು; ಬಾಳಿಂಗೆ ಒಳನಾಡಿ. ಒಳ್ಳೆಯ ಮಾತು ಅಂತರಂಗದ ಶುದ್ಧಿ ವಿಕಾಸಗಳನ್ನುಂಟುಮಾಡಿ ತನ್ಮುಖೇನ ಆತನಿಗೆ ಘನ ವ್ಯಕ್ತಿತ್ವವನ್ನು ತಂದು ಕೊಡುತ್ತದೆ. ಅಂತೆಯೇ ಆ ಮಾತಿನಿಂದಲೇ ಮನುಷ್ಯನ ಅಧಃಪತನವೂ ಆಗುತ್ತದೆ. ಆದ್ದರಿಂದ ಮನುಷ್ಯ ಮಾತಿನಿಂದ ಏನೆಲ್ಲವನ್ನೂ ಸಾಧಿಸಬಹುದು.

ಮಾತಿನಿಂ ನಗೆನುಡಿಯು । ಮಾತಿನಿಂ ಹಗೆ ಕೊಲೆಯು ।
ಮಾತಿನಿಂ ಸರ್ವಸಂಪದವು ಲೋಕಕ್ಕೆ ।
ಮಾತೆ ಮಾಣಿಕವು ಸರ್ವಜ್ಞ ॥

ಎಂಬುದಾಗಿ ಲೋಕಾನುಭಾವಿ ಸರ್ವಜ್ಞ ಮಾತಿನ ಅರ್ಥವನ್ನು ಸುಂದರವಾಗಿ ಹಾಡಿದ್ದಾನೆ.

ನಮ್ಮ ಶರಣರು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಈ ಮಾತಿಗೆ ದಿವ್ಯ ವ್ಯಾಖ್ಯೆಯನ್ನು ಕೊಟ್ಟಿದ್ದಾರೆ. ಮಾತೆಂಬುದು ಜ್ಯೋತಿರ್ಲಿಂಗ; ನುಡಿದರೆ ಮುತ್ತಿನ ಹಾರದಂತೆ ಮನೋಹಾರಿಯಾಗಿರಬೇಕು; ಮಾಣಿಕ್ಯ ದೀಪ್ತಿಯಂತೆ ಅರ್ಥದ ಹೊಳಹು ತುಂಬಿರಬೇಕು. ಅಷ್ಟೇಕೆ, ಲಿಂಗವೇ ಮೆಚ್ಚಿ ಅಹುದಹುದೆಸಬೇಕು....ಮುಂತಾಗಿ. ಆದರೆ ಈ ಮಾತಿಗೆ ಅರ್ಥವಂತಿಕೆ ಬರಬೇಕಾದರೆ ಅದರಲ್ಲಿ ಒಡಕ್ಕಾಗಲೀ ಟೊಳ್ಳುತನವಾಗಲೀ ಇರಕೂಡದು. ಮೇಲಾಗಿ ಅದು ಚೇತಸ್ಪರ್ಶಿಯಾಗಿರಬೇಕು. ಮನೋಹಾರಿಯಾದ ಮಾತುಗಳಿಂದ ಮೈಮನಗಳ ಶುದ್ಧಿಯಾಗುವುದು. ಆದರೆ ಇಂಥ ಮಾತುಗಳು ಅತಿ ವಿರಳ. "ಹಿತಂ ಮನೋಹಾರಿಚ ದುರ್ಲಭಂ ವಚಃ".

ಒಟ್ಟಿನಲ್ಲಿ ಜಗತ್ತಿನಲ್ಲಿಂದು ಎಲ್ಲೆಡೆ ಮಾತಿನಲ್ಲಿ ಟೊಳ್ಳುತನ ತಾಂಡವವಾಡುತ್ತಿದೆ. ಆದ್ದರಿಂದ ಎಲ್ಲಿಯವರೆಗೆ ಮಾತಿಗೆ ದೀಪ್ತಿ ಮೌಲ್ಯಗಳು ಬರುವುದಿಲ್ಲವೋ ಅಲ್ಲಿಯವರೆಗೆ ಮಾನವನ ಆತ್ಮ ವಿಕಾಸವೂ ಸಾಧ್ಯವಿಲ್ಲ; ತನ್ಮುಖೇನ ಜಗತ್ತಿನ ಉದ್ಧಾರವೂ ಸಾಧ್ಯವಿಲ್ಲ.

# 'ಸಿದ್ಧಗಂಗಾ'

## ಸೆಪ್ಟೆಂಬರ್, ೧೯೭೮

ಸಂಪುಟ–೧೪ ಸಂಚಿಕೆ–೯

ಪ್ರಕಾಶಕರು

ಹೆಚ್. ಬಿ. ಗಂಗಾಧರಯ್ಯ

ಹಳೆಯ ವಿದ್ಯಾರ್ಥಿಸಂಘದ ಪರವಾಗಿ

ಸಂಪಾದಕ ಮಂಡಲಿ

ಪಂ|| ಚನ್ನಪ್ಪ ಎರೇಸೀಮೆ

ಪಿ. ಎಸ್. ಚಂದ್ರಶೇಖರಯ್ಯ

ವಿರೂಪಾಕ್ಷಯ್ಯ

ಬಸವರಾಜು

ಜಾಹಿರಾತು ವ್ಯವಸ್ಥಾಪಕರು

ಎಂ. ರೇಣುಕಾರಾಧ್ಯ

ಮುದ್ರಕರು

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ

ಪ್ರಕಟಣೆಯ ಸ್ಥಳ

ಶ್ರೀ ಸಿದ್ಧಗಂಗಾ ಕ್ಷೇತ್ರ

ಚಂದಾ ವಿವರ

ಅಜೀವ ಸದಸ್ಯತ್ವ: **151-00** ರೂ

ವಾರ್ಷಿಕ ಚಂದಾ: **10–00** ರೂ


## ಈ ಸಂಚಿಕೆಯಲ್ಲಿ



ಮುಖಪುಟ

ಜ್ಞಾನ ಪೀಠ ಪ್ರಶಸ್ತಿ ವಿಜೇತರು

ಕಡಲ ಕರೆಯ ಭಾರ್ಗವಕಾರಂತರು.

### ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಲೇಖಕರಿಂದ ಧಾರ್ಮಿಕ, ಸಾಂಸ್ಕೃತಿಕ ಐತಿಹಾಸಿಕ ಹಾಗೂ ವೈಚಾರಿಕ ಲೇಖನಗಳು, ಸಣ್ಣಕಥೆ, ಕವನ, ನಗೇಹನಿ, ಪ್ರಬಂಧ ಇವುಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್‌ಸ್ಕೇಪ್ ಸೈಜಿನ 3 ಪುಟಗಳಿಗೆ ಮೀರದಂತಿದ್ದು, ಕಾಗದದ ಒಂದೇ ಮಗ್ಗುಲಲ್ಲಿ ಬರೆಯಲ್ಪಟ್ಟಿರಬೇಕು. ಅಸ್ವೀಕೃತ ಲೇಖನಗಳನ್ನು ಹಿಂದಿರುಗಿಸಲಾಗುವುದಿಲ್ಲ. ಸ್ವೀಕೃತ ಲೇಖನಗಳಿಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿಪಡಿಸಿಕೊಳ್ಳುವ ಸಂಭಾವನೆಯನ್ನು ನೀಡಲಾಗುವುದು. ಲೇಖನಗಳನ್ನು

"ಸಂಪಾದಕರು"

"ಸಿದ್ಧಗಂಗಾ" [ಕನ್ನಡ ಮಾಸ ಪತ್ರಿಕೆ]

ಶ್ರೀ ಸಿದ್ಧಗಂಗಾ ಕ್ಷೇತ್ರ–572131 ತುಮಕೂರು ಜಿಲ್ಲೆ.

ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.

### ಚಂದಾದಾರರಲ್ಲಿ ಮನವಿ

ಹೊಸ ವರ್ಷದ ನಿಮ್ಮ ಚಂದಾ ನಂಬರ್ ಗುರುತಿಸಿಕೊಳ್ಳಿ. ಚಂದಾ ಅವಧಿ ಮುಗಿಯುವವರೆಗೆ ವಿಳಾಸ ಬದಲಾವಣೆ ಮತ್ತು ಇತರೆ ಬಗ್ಗೆ ವ್ಯವಹರಿಸುವಾಗ ನಿಮ್ಮ ವಿಳಾಸದ ಹಿಂಬದಿ ಇರುವ ಚಂದಾ ನಂಬರ್ ಅಥವಾ ಯಾರ ಮೂಲಕ ಸದಸ್ಯತ್ವ ಪಡೆದಿರುವಿರೋ ಆ ನಮ್ಮ ಪ್ರತಿನಿಧಿಗಳ ಹೆಸರನ್ನು ಸೂಚಿಸಿ ವ್ಯವಹರಿಸಿ.

ಚಂದಾ ಬಾಕಿ ಇರುವವರು ಸಂದಾಯ ಮಾಡಿ 'ಸಿದ್ಧಗಂಗಾ' ಮುನ್ನಡೆಗೆ ಸಹಕರಿಸಿ.

ಚಂದಾ ಅವಧಿ ಮುಗಿದಿರುವ ಮಾನ್ಯ ಓದುಗರು ಮುಂದಿನ ಸಾಲಿಗೆ ಮುಂದುವರಿಸಿಕೊಳ್ಳಬೇಕಾಗಿ ಪ್ರಾರ್ಥನೆ.

ಪ್ರಕಾಶಕರು

'ಸಿದ್ಧಗಂಗಾ' ಮಾಸ ಪತ್ರಿಕೆ, ಸಿದ್ಧಗಂಗಾ ಮಠ–572131 **ತುಮಕೂರು ಜಿಲ್ಲೆ.**

# ನವನೀತ

( ಸಂಸ್ಕೃತ ಶ್ಲೋಕಗಳ ಭಾವಾನುವಾದ )

ಅದತ್ತೇ ತ್ಯಾಗತಾ ಲಜ್ಜಾ ದತ್ತೇತಿ ವ್ಯಥಿತಂ ಮನಃ ।
ಧರ್ಮಸ್ನೇಹಾಂತರೇ ನ್ಯಸ್ತಾಃ ದುಃಖಿತಾಃ ಖಲು ಮಾತರಃ ॥

ಮದುವೆಯಾಗದ ಮಗಳಿದ್ದರೆ ತಪ್ಪದು ಅಮ್ಮಗೆ ನಾಚಿಕೆ,
ಸಹಿಸಲಾಗದು ತಾಯಿಗೆ ಮದುವೆಯಿಂದುಂಟಾದ ಅಗಲಿಕೆ.
ಒಂದುಕಡೆ ಕರ್ತವ್ಯ ಮತ್ತೊಂದು ಕಡೆ ವಾತ್ಸಲ್ಯ,
ಇವೆರಡರ ನಡುವೆ ಸಿಕ್ಕಿಕೊಂಡ ತಾಯ ದುಃಖ ಬಾಂಧವ್ಯ.

❀ ○ ❀

ಕಾತರಾಃ ಪರದುಃಖೇಷು ನಿಜದುಃಖೇಷ್ವಕಾತರಾಃ ।
ಅರ್ಥೇಷ್ವಲೋಭಾ ಯಶಸಿ ಸಲೋಭಾಃ ಸಂತಿ ಸಾಧವಃ ॥

ಪರರ ದುಃಖವನು ಪರಿಹರಿಸಲು ಕಾತರರು ಸಜ್ಜನರು,
ತಮ್ಮ ದುಃಖವನು ಪರಿಹರಿಸಲು ಅವರೇ ನಿರಾಸಕ್ತರು.
ಹಣಗಳಿಸಲು ಅವರಿಗಿಲ್ಲ ಹಿರಿದು ಆಸೆ,
ಕೀರ್ತಿ ಸಂಪಾದಿಸಲು ಹಿರಿತನದೊಂದೇ ಆಸೆ.

❀ ○ ❀

ನೋದನ್ವಾನರ್ಥಿತಾಮೇತಿ ಸದಾಂಭೋಭಿಃ ಪ್ರಪೂರ್ಯತೇ ।
ಆತ್ಮಾ ತು ಪಾತ್ರತಾಂ ನೇಯಃ ಪಾತ್ರಮಾಯಾಂತಿ ಸಂಪದಃ ॥

ಸಮುದ್ರ ತಾನೆಂದೂ ಬೇಡದು ದೈನ್ಯದಿಂದ,
ಆದರೆ ತುಂಬಿಹುದು ಸದಾ ನೀರಿನಿಂದ.
ನಾವು ಸಂಪಾದಿಸಬೇಕು ಮೊದಲು ಯೋಗ್ಯತೆ,
ಸಂಪತ್ತು ಬರುವುದು ತಾನಿರುವೆಡೆ ಯೋಗ್ಯತೆ.

❀ ○ ❀

ಕಾವ್ಯ ಸುಧಾಪ್ರಿಯ

# ಅಮೃತ ಬಿಂದು

"ನಾನೃಷಿಃ ಕುರುತೇ ಕಾವ್ಯಂ" – ನಮ್ಮವರು ಕವಿಗಳನ್ನು ಋಷಿಗಳು ಅಥವಾ ದ್ರಷ್ಟಾರರು ಎಂದು ಕರೆದರು. ಇಲ್ಲಿ ಒಬ್ಬ ಋಷಿ, ಮತ್ತೊಬ್ಬ ರಸ ಋಷಿ. ಈ ಇಬ್ಬರೂ ಬದುಕಿನ ಸತ್ಯ ಸಂಶೋಧಕರು. ಈ ಸತ್ಯಾನ್ವೇಷಕರ ಗುರಿ ಆನಂದಾನುಭೂತಿ. ಸ್ಥೂಲವಾಗಿ ಇಬ್ಬರ ಗುರಿ ಒಂದೇ ಆದರೂ ಮಾರ್ಗ ಬೇರೆ. ಸತ್ಯದಲ್ಲಿ ರಸ ಋಷಿಗೆ ಬದುಕಿನ ಹಲವು ಮುಖಗಳ ಪರಿಚಯ ಇರುತ್ತದೆ. ಬದುಕನ್ನು ಜೀರ್ಣಿಸಿ ಕೊಂಡಿರುತ್ತಾನೆ. ಬದುಕಿನ ಹೊರ ಹೊಳಗನ್ನು ವ್ಯಾಪಿಸಿ ನಿಂತಿರುತ್ತಾನೆ. ಬದುಕಿನ ಸತ್ಯಶೋಧಕನಾಗಿ ಸುಖ-ದುಃಖ ನೋವು ನಲಿವುಗಳನ್ನು ಅರಿತು ಅನುಭವಿಸಿ ಆನಂದಿಸುತ್ತಾನೆ. ತಾನು ಆನಂದಿಸಿದ ರಸದೌತಣವನ್ನು ಇತರರಿಗೂ ಅನುಭವಿಸಲು ಅನುವುಮಾಡಿ ಕೊಡುತ್ತಾನೆ ಭಾಷಾಮಾಧ್ಯಮದಿಂದ. ತನ್ನ ಆನಂದದ ಅನುಭವವನ್ನು ಸಾಹಿತ್ಯದ ಹಲವು ಪ್ರಕಾರಗಳಲ್ಲಿ ತಿಳಿಯಪಡಿಸುತ್ತಾನೆ. ತಿಳಿದು ಆನಂದಿಸಿದ ಜನತೆ ಆವನು ಪಡೆದ ಪದವಿ ಪಾಂಡಿತ್ಯ ಅನುಭವಕ್ಕೆ ತಕ್ಕ ಪುರಸ್ಕಾರ ನೀಡುತ್ತದೆ. ಅಂತೆಯೇ "ಕಡಲ ಕರೆಯ ಭಾರ್ಗವ" ಕಾರಂತರಿಗೆ ದೊರೆತ ಜ್ಞಾನಪೀಠಪ್ರಶಸ್ತಿ.

—ದುಂಬಿ

# ನಮ್ಮ ಕಾರಂತರು

1977 ರ ಜ್ಞಾನಪೀಠ ಪ್ರಶಸ್ತಿ, ಡಾಕ್ಟರ್ ಶಿವರಾಮ ಕಾರಂತರ 'ಮೂಕಜ್ಜಿಯ ಕನಸುಗಳು' ಕಾದಂಬರಿಗೆ ದೊರೆತದ್ದು ಕನ್ನಡಿಗರಿಗೆ ಅತ್ಯಂತ ಸಂತೋಷದ ಸಂಗತಿ. ಇದು ಅಖಿಲ ಭಾರತಕ್ಕೆ ಅರ್ಥವತ್ತಾದ ಸಂಗತಿ. ದೇಶದ ಸಾರ್ವಜನಿಕ ಜೀವನ ಎಷ್ಟೇ ಬೇಸರ ಪಡಿಸುವಂತಿದ್ದರೂ ಜೀವನದ ನಿಜವಾದ ಮೌಲ್ಯಗಳನ್ನು ದೇಶ ಇನ್ನೂ ಮರೆತಿಲ್ಲ, ಅವನ್ನು ಗೌರವಿಸುತ್ತದೆ ಎನ್ನುವುದಕ್ಕೆ ಇದು ಸಾಕ್ಷಿ ಎನ್ನುತ್ತಾರೆ ಮಾನ್ಯ ಲೇಖಕರು.

---

ಜ್ಞಾನ ಪೀಠ ಪ್ರಶಸ್ತಿ ಈ ದೇಶದಲ್ಲಿ ಒಬ್ಬ ಸಾಹಿತಿಗೆ ಲಭ್ಯವಾಗ ಬಹುದಾದ ಅತ್ಯಂತ ಉಚ್ಚ ಗೌರವ. ಕಾರಂತರು ಈಗಾಗಲೇ ನಲವತ್ತಕ್ಕೂ ಮೀರಿ ಕಾದಂಬರಿಗಳನ್ನು ಬರೆದಿದ್ದಾರೆ, ಜ್ಞಾನಪೀಠ ಪ್ರಶಸ್ತಿಯನ್ನು ಪಡೆದ ಭಾರತದಲ್ಲಿ ಸಾಹಿತ್ಯಕೃತಿಗಳನ್ನು ಪಟ್ಟಿಮಾಡಬಹುದಾದರೆ ಆ ಪಟ್ಟಿಯಲ್ಲಿ ಅಗತ್ಯವಾಗಿ ಸೇರಬಹುದಾದಂತಹ ಮೂರು ನಾಲ್ಕು ಇತರ ಕಾದಂಬರಿಗಳನ್ನು ಬರೆದಿದ್ದಾರೆ — 'ಮರಳಿ ಮಣ್ಣಿಗೆ' 'ಬೆಟ್ಟದ ಜೀವ' 'ಧರ್ಮರಾಯನ ಸಂಸಾರ' ಅಳಿದ ಮೇಲೆ' ಇಂತಹವು. ಅವರು ಬರೆದಿರುವ ಎಲ್ಲ ಕೃತಿಗಳ ಸಂಖ್ಯೆ ಸುಮಾರು 215. ಇವುಗಳಲ್ಲಿ ಕಾದಂಬರಿಗಳಲ್ಲದೆ ನಾಟಕಗಳಿವೆ. ಪ್ರಬಂಧಗಳಿವೆ, ಮಕ್ಕಳ ಸಾಹಿತ್ಯವಿದೆ. ಹಿಂದೆ ಬರೆದ ಆತ್ಮವೃತ್ತ 'ಹುಚ್ಚು ಮನಸ್ಸಿನ ಹತ್ತು ಮುಖಗಳು' ಈಚಿಗೆ ಪ್ರಕಟವಾದ 'ಸ್ಮೃತಿಪಟಗಳಿಂದ' ದ ಎರಡು ಸಂಪುಟಗಳು. ಇವಲ್ಲದೆ ಮಕ್ಕಳಿಗೂ ಸಿದ್ಧಮಾಡಿದ ವಿಶ್ವಕೋಶ 'ಬಾಲಪ್ರಪಂಚ' ದೊಡ್ಡವರಿಗಾಗಿ ರಚಿಸಿದ 'ವಿಜ್ಞಾನ ಪ್ರಪಂಚದ' ನಾಲ್ಕು ಭಾಗಗಳು. ಕಲೆಯನ್ನು ಕುರಿತು 'ಕರ್ನಾಟಕದಲ್ಲಿ ಚಿತ್ರಕಲೆ, 'ಚಾಲುಕ್ಯ ವಾಸ್ತು ಕಲೆಗಳು' 'ಭಾರತೀಯ ಶಿಲ್ಪ' 'ಸಿಂಗನ್ನಡ ಅರ್ಥ ಕೋಶ' ವನ್ನು ಸಿದ್ಧಗೊಳಿಸಿದ್ದಾರೆ. 'ಕೋಳಿಸಾಕಣೆ' ಯನ್ನು ಕುರಿತು ಬರೆದಿದ್ದಾರೆ, 'ಗೃಹ ವಿಜ್ಞಾನ'ವನ್ನು ಕುರಿತು ಬರೆದಿದ್ದಾರೆ' ಪಕ್ಷಿಗಳನ್ನು ಕುರಿತು ಬರೆದಿದ್ದಾರೆ. ಮಕ್ಕಳಿಗಾಗಿ ಒಂದು ವಿಶ್ವಕೋಶವನ್ನು ಸಿದ್ಧಗೊಳಿಸುವುದು, ದೊಡ್ಡವರಿಗಾಗಿ ವಿಜ್ಞಾನ ವಿಶ್ವಕೋಶವನ್ನು ಸಿದ್ಧಗೊಳಿಸುವುದು ವಿಶ್ವವಿದ್ಯಾನಿಲಯದಂತಹ ಒಂದು ಸಂಸ್ಥೆ ಹತ್ತಾರು ಮಂದಿ ಪ್ರೊಫೆಸರ್‌ಗಳು ಮತ್ತು ಹೊರಗಿನ ವಿದ್ವಾಂಸರ ನೆರವಿನಿಂದ ಹಲವು ವರ್ಷಗಳ ಕಾಲದಲ್ಲಿ ಮಾಡುವುದಾದ ಕೆಲಸ ; ಇದಾದ ಮೇಲೂ ಪುಸ್ತಕಗಳ ಅಚ್ಚಿನ ಕೆಲಸವನ್ನು ದೊಡ್ಡ ಅಚ್ಚಿನ ಕೂಟ, ಆದರ ತಜ್ಞರಿಗೆ ಒಪ್ಪಿಸಬೇಕಾಗುತ್ತದೆ. ಜ್ಞಾನದ ಹಲವಾರು ವಿಭಾಗಗಳಲ್ಲಿ ಸಂಕೀರ್ಣವಾದ ಚಿತ್ರಗಳನ್ನು ನಿಖರವಾಗಿ ಬರೆಸಿ, ಬ್ಲಾಕ್ ಮಾಡಿಸಿ, ಅಗತ್ಯವಾದಾಗ ಸರಿಯಾದ ಬಣ್ಣಗಳನ್ನು ಆರಿಸಿ, ಅಚ್ಚುಮಾಡುವುದು ತಜ್ಞರ ಕೆಲಸ. ಸಾಹಿತಿ ಎಂದು ಪ್ರಸಿದ್ಧರಾದ ಕಾರಂತರು ತಾವೊಬ್ಬರೇ (ಅಗತ್ಯವಾದಾಗ ತಜ್ಞನರ ಸಹಾಯವನ್ನು ಪಡೆದು ಕೊಂಡು,) ಮಕ್ಕಳ ವಿಶ್ವಕೋಶವನ್ನು ರಚಿಸಿದ್ದಲ್ಲದೆ ಬಾಕ್ಲ್ ಮಾಡುವುದನ್ನು ತಾವೇ ಕಲಿತರು. ಈ ವಿಶ್ವಕೋಶ, ವಿಜ್ಞಾನ ಪ್ರಪಂಚ ಎರಡರ ಅಂಚಿನ ಕೆಲಸದ ಹೊಣೆಯನ್ನು ತಾವೇ ವಹಿಸಿಕೊಂಡರು. ಈ ಸಾಹಿತಿಗೆ ಭಾರತದ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ

ಂಡದ್ದೂ ಕಾದಂಬರಿಗಲ್ಲ. 'ಯಕ್ಷಗಾನ' ಎಂಬ
ೃತಿಗೆ.

ಕಾರಂತರ ಸಾಹಿತ್ಯಸೃಷ್ಟಿಯ ಪ್ರಮಾಣ, ವೈವಿಧ್ಯ
ಶ್ಚರ್ಯಗೊಳಿಸುವಂತಹವು. ಆದರೆ ಈ ಸಾಹಿತ್ಯ
ಮ್ಮ ಬಾಳಿನ 'ಬೈಪ್ರಾಡಕ್ಟ್' ಎಂದಿದ್ದಾರೆ ಕಾರಂತರ
ಇಂಗ್ಲಿಷಿನ ಒಬ್ಬ ಕವಿ ಆಧುನಿಕ ಕಾಲದ ಮನುಷ್ಯರನ್ನು
ುರಿತು 'We half men live' ಎಂದಿದ್ದಾನೆ.
ಮ್ಮಲ್ಲಿ ಬಹು ಮಂದಿ 'ಹಾಫ್ ಮೆನ್' ಬಾಳು
ಷ್ಟೊಂದು ಶ್ರೀಮಂತ, ಎಂತೆಂತಹ ಅನುಭವಗಳನ್ನು
ೊಡಬಲ್ಲದು, ತಿಳಿದುಕೊಳ್ಳಲು ಹೋಟರೆ. ಎಷ್ಟು
ಜ್ಞಾನವಿದೆ ಪ್ರಪಂಚದಲ್ಲಿ ಎಂಬುದನ್ನು ಗುರುತಿಸದೆ ಸಣ್ಣ
ುಷ್ಟ ವ್ಯವಹಾರಗಳಲ್ಲಿ ಮುಳುಗಿ ಹೋದವರು, ಹತ್ತು
ಶ್ವಶಕ್ತಿಯ ಯಂತ್ರವನ್ನು ಮನೆಗೆ ತರಕಾರಿ, ಚಾಕಲೇಟ್
ಳನ್ನು ತರಲು ಕೈಗಾಡಿ ಎಳೆಯಲು ಬಳಸುವಂತೆ
ಾವು ಬಾಳುವುದು. ಮತ್ತೊಬ್ಬ ಇಂಗ್ಲಿಷ್ ಕವಿ ಒಬ್ಬ
ೂರನ ಬಾಯಿಯಿಂದ ಒಂದು ಮಾತನ್ನು ಹೇಳಿಸಿ
ದ್ದಾನೆ : 'All times I have enjoyed
reatly, have suffered greaty' ಕಾರಂತರು
ಬಗೆಯ ವ್ಯಕ್ತಿ, ಅವರೂ ಈ ಮಾತುಗಳನ್ನು ಹೇಳಬ
ುದು. ಬಾಳು ಏನೇನು ಅನುಭವಗಳನ್ನು ನೀಡಬ
ುದು. ಭೌತಿಕ ಪ್ರಪಂಚ ಮತ್ತು ಬೌದ್ಧಿಕ ಪ್ರಪಂಚ
ಳಲ್ಲಿ ಎಂತೆಂತಹ ಸಾಹಸಗಳು ಲಭ್ಯವಾಗಬಹುದು ಆ
ಲ್ಲ ಅನುಭವಗಳನ್ನು ಸಾಹಸಗಳನ್ನು ತಮ್ಮದನ್ನಾಗಿ
ಮಾಡಿಕೊಳ್ಳುವ ಅತ್ಯುತ್ಕಟ ಹಂಬಲ ಮಾತ್ರವಲ್ಲ ಮನ
್ಥೈರ್ಯ ಅವರದು. ಯಾವುದನ್ನೂ ಅವರಿವರು ಹೇಳಿ
ುದನ್ನು ಕೇಳಿ ತೃಪ್ತಿಪಟ್ಟುಕೊಳ್ಳುವ ಚೇತನವೇ ಅವರ
ಲ್ಲ. ಸಾಧ್ಯವಾದಮಟ್ಟಿಗೂ ಎಲ್ಲ ವಿಷಯವನ್ನೂ
ಾವೇ ತಿಳಿದುಕೊಳ್ಳಬೇಕು, ತಾವೇ ಪ್ರಯೋಗಮಾಡಿ
ೋಡಬೇಕು, ತಾವೇ ಅನುಭವಿಸ ಬೇಕು. ಆದಕ್ಕಾಗಿ
ವರು ಬ್ಲಾಕ್ ಮೇಕಿಂಗ್ ಕಲಿಯುತ್ತಾರೆ, ಕೋಳಿ
ಾಕುತ್ತಾರೆ, ಮಲೆನಾಡಿನ ಒಂದು ವಿಶಿಷ್ಟಜನಾಂಗದ
ೊತೆಗೆ ಮೂರು ತಿಂಗಳು ವಾಸ ಮಾಡುತ್ತಾರೆ, ಅಚ್ಚು
ಮಾಡುವ ಮೊಳೆಗಳನ್ನು ಯಾವ ಯಾವ ದೇಶದಲ್ಲಿ
ಯಾವ ಯಾವ ಲೋಹಗಳು ಅಥವಾ ಇತರ ವಸ್ತುಗ
ಳನ್ನು ಬಳಸಿ ಮಾಡುತ್ತಾರೆ ಎಂದು ಅಭ್ಯಾಸ ಮಾಡುತ್ತಾ

ರೆ, ಗೆಜ್ಜೆ ಕಟ್ಟಿ ಕುಣಿಯುತ್ತಾರೆ, ಚಲನ ಚಿತ್ರ ಮಾಡು
ತ್ತಾರೆ, ಗಾಂಧೀಜಿಯ ಆಶ್ರಮದಲ್ಲಿ ವಾಸಮಾಡುತ್ತಾರೆ,
ಈಜಿಪ್ಟಿಗೆ ಹೋಗುತ್ತಾರೆ, ಇಟಲಿಗೆ ಹೋಗುತ್ತಾರೆ, ಕೈ
ಕೊಳೆಯಾಗುತ್ತದೆ, ಮೈಕೈ ನೋಯುತ್ತದೆ, ದೇಹಕ್ಕೆ
ದಣಿವಾಗುತ್ತದೆ, ಖರ್ಚಾಗುತ್ತದೆ, ನಷ್ಟವಾಗು
ತ್ತದೆ, ಅವರಿವರಿಗೆ ಸಿಟ್ಟು ಬರುತ್ತದೆ, ಮನೆಯನ್ನು
ಬಿಟ್ಟು ಸರಿಯಾಗಿ ಊಟತಿಂಡಿ ನಿದ್ರೆ ಇಲ್ಲದೆ ತಿಂಗಳು
ಗಟ್ಟಲೆ ಶ್ರಮಿಸ ಬೇಕಾಗುತ್ತದೆ ಎನ್ನುವ ಯಾವ ಯೋಚ
ನೆಯೂ ಅವರ ಜ್ಞಾನನಿಷ್ಠೆಗೆ, ಸಾಹಸದ ಅನ್ವೇಷಣೆಗೆ
ಅಡ್ಡಿ ಬಾರದು. ಅವರ ಪ್ರಯೋಗಧೀರತೆಗೆ ಒಂದು ನಿದ
ರ್ಶನ. ಈ ಶತಮಾನದ ಪ್ರಾರಂಭದ ದಶಕದಲ್ಲಿ
ಮೂಕ ಚಲನಚಿತ್ರಗಳು ಹೆಚ್ಚಾಗಿ ಪ್ರದರ್ಶನವಾಗುತ್ತಿ
ದ್ದವು. ಕಾರಂತರಿಗೂ ಚಲನಚಿತ್ರಗಳನ್ನು ಮಾಡುವ
ಆಸೆ. ಚಲನಚಿತ್ರ ತಯಾರಿಸುವವರೊಡನೆ ಕೆಲಸ ಮಾಡಿ
ಅನುಭವ, ತಿಳಿವಳಿಕೆ ಪಡೆಯುವ ಅವಕಾಶವಿರಲಿಲ್ಲ.
ಹಾಗೆಂದು ಸುಮ್ಮನೆ ಕೂಡುವವರೇ ಕಾರಂತರು ? ಆಗ
ಲೇ ನಾಟಕಗಳನ್ನು ಆಡಿಸಿದ್ದರು. ಚಲನ ಚಿತ್ರಗಳ
ತಯಾರಿಕೆಯನ್ನು ಕುರಿತು ಪುಸ್ತಕಗಳನ್ನು ಓದಿದರು.
ತಮ್ಮದೇ ಒಂದು ನಾಟಕವನ್ನು ಆರಿಸಿಕೊಂಡರು.
'ಕಿನಾಮೋ' ಎಂಬ ಸಿನೇ ಕ್ಯಾಮೆರಾ ನಾಲ್ಕುನೂರು
ರೂಪಾಯಿಗಳಿಗೆ ಕೊಂಡರು. (ಈಗಿನ ರೂಪಾಯಿ ಕೊಳ್ಳ
ಬಹುದಾದ ಸಾಮಾನುಗಳ ದೃಷ್ಟಿಯಿಂದ ಹೋಲಿಸಿ
ದರೆ ಇದು ಇಂದಿನ ಎಂಟು ಹತ್ತು ಸಾವಿರರೂಪಾಯಿಗ
ಳಿಗೆ ಸಮನಾದೀತು.) ಆದಕ್ಕೆ ಫಿಲ್ಮು, ಪೀಠ, 'ಸಿನೇ
ಫಾಟ್' ಎಂಬ ಬೆಳಕನ್ನಳೆಯುವ ಮಾಪಕ ಎಲ್ಲ
ವನ್ನೂ ಕೊಂಡರು. ಒಂದುವಾರದಲ್ಲಿ ಎಂಟು ನೂರು
ಅಡಿಯಷ್ಟು ಚಿತ್ರ ತೆಗೆದರು. ನೆಗೆಟಿವ್‌ನ್ನು ರಾಸಾಯ
ನಿಕಗಳಲ್ಲಿ ವರ್ಧಿಸುವುದು ಇತ್ಯಾದಿ ಕೆಲಸಕ್ಕೆ ಅಗತ್ಯ
ವಾದ ಸಲಕರಣೆಗಳನ್ನು ತಾವೇ ಒಬ್ಬ ಬಡಗಿಯಿಂದ
ಮಾಡಿಸಿದರು. ಸಹಾಯಕರೊಬ್ಬರನ್ನು ಕರೆದುಕೊಂಡು
ತಾವೇ ಫಿಲ್ಮ್ ವರ್ಧನೆಯ ಕೆಲಸ ಮಾಡಿದರು. ನೆಗ
ಟಿವ್ ಅನ್ನು ಮುದ್ರಿಸಲು ಮುಂಬಯಿಯ ಕಂಪೆನಿಗೆ ಕಳು
ಹಿಸಿಕೊಟ್ಟರು. ಅದು ಹಿಂದಕ್ಕೆ ಬಂದನಂತರ ಸ್ನೇಹಿತ
ರೊಬ್ಬರ ಚಿತ್ರಮಂದಿರದಲ್ಲಿ ಅದನ್ನು ನೋಡಲು ವ್ಯವಸ್ಥೆ
ಮಾಡಿಕೊಂಡರು. ಪರದೆಯ ಮೇಲೆ ಚಿತ್ರ ಬಿದ್ದಂತೆ
ಕಾರಂತರಿಗೆ ತಮ್ಮ ಕಣ್ಣನ್ನು ತಾವೇ ನಂಬಲಾಗಲಿಲ್ಲ.

ಏಕೆಂದರೆ ಕಂಡದ್ದು ದೃಶ್ಯಗಳಲ್ಲ ಬರಿಯ ಕರಿಯ ಚುಕ್ಕೆಗಳ ಹಿಂಡು! ನಿರಾಶೆಯಿಂದ ಮನೆಗೆ ಬಂದರು, ಮುಂಬಯಿಯ ಕಂಪನಿಗೆ ಕಾಗದ ಬರೆದರು. ಫಿಲ್ಮನ್ನು ವರ್ಧಿಸುವ ೨ ದಲ್ಲಿ ಉಷ್ಣತೆ ಹೆಚ್ಚಾಗಿದ್ದಿರಬೇಕು ಎಂದು ಕಂಪನಿಯವರು ಉತ್ತರ ಬರೆದರು. ಇನ್ನಾರಾದರೂ ಆಗಿದ್ದರೆ ಈ ಕೆಲಸವನ್ನು ಅಲ್ಲಿಗೇ ಬಿಡುತ್ತಿದ್ದರು. ಆದರೆ ಕಾರಂತರು ಕಾರಂತರೇ! ಮುಂಬಯಿಗೆ ಹೋಗಿ ಲ್ಯಾಬೊರೇಟರಿಗಳಿಗೆ ಭೇಟಿಕೊಟ್ಟು ಕೆಲಸ ಮಾಡಿ ವಿಷಯಗಳನ್ನು ತಿಳಿದುಕೊಂಡರು, ಮತ್ತೆ ಚಿತ್ರ ತೆಗೆದರು ಅವನ್ನು ನೆಗೆಟಿವ್ ಮತ್ತು ಪಾಸಿಟಿವ್ ಮಾಡಲು ಮುಂಬಯಿಗೆ ಕಳುಹಿಸಿದರು. ಚಿತ್ರ ಪ್ರದರ್ಶನಕ್ಕೆ ಸಿದ್ಧವಾಗಿ ಬಂತು. ಚಲನ ಚಿತ್ರವನ್ನು ತೋರಿಸಲು ಒಂದು ಮಕ್ಕಳ ಶಿಬಿರದಲ್ಲಿ ತೋರಿಸಲು ತೀರ್ಮಾನಿಸಿದರು. ಅದಕ್ಕೆ ವಿದ್ಯುತ್ತು ಬೇಕಲ್ಲ! ಕಾರಂತರೇ ಒಂದು ಆಯಿಲ್ ಎಂಜಿನ್ನನ್ನೂ ವಿದ್ಯುತ್ ಉತ್ಪಾದಕವನ್ನೂ ಕೊಂಡರು. ಫಿಲ್ಮನ್ನು ತೋರಿಸಲು ಎಲ್ಲ ಸಿದ್ಧತೆಗಳಾದವು (ಇದು 1931 ರಲ್ಲಿ) ಪ್ರೊಜೆಕ್ಟರಿನಲ್ಲಿ ಸಣ್ಣ ದೋಷವೊಂದು ಕಂಡು ಕಾರಂತರು ಅದನ್ನು ಸರಿಮಾಡಲು ತೊಡಗಿದರು. ಚಲನ ಚಿತ್ರದ ರೀಲುಗಳು ನೆಲದ ಮೇಲೆ ಬಿದ್ದಿದವು. ಯಾರೋ ಪೆಟ್ರೋಮಾಕ್ಸ್ ದೀಪ ಹಚ್ಚಲು ಹೋದರು. ರೀಲುಗಳಿಗೆ ಬೆಂಕಿ ಹತ್ತಿ ಅಷ್ಟೂ ಸುಟ್ಟುಹೋದವು. ಮತ್ತೆ ಚಲನ ಚಿತ್ರದ ತಯಾರಿಕೆಯನ್ನು ಪ್ರಾರಂಭಿಸಿದರು ಕಾರಂತರು, ಬೇರೊಂದು ಕಥೆಯನ್ನು ಬರೆದರು. ಚಿತ್ರತೆಗೆದರು ಅದು ಪ್ರದರ್ಶನಕ್ಕೆ ಸಿದ್ಧವಾಯಿತು. ಈ ಹೊತ್ತಿಗೆ ಕಾರಂತರಿಗೆ ನಾಲ್ಕು ಸಾವಿರ ರೂಪಾಯಿ ಸಾಲವಾಗಿತ್ತು. ಅವರ ಮೂಕ ಚಿತ್ರ ಪ್ರದರ್ಶನಕ್ಕೆ ಸಿದ್ಧವಾಗುವಹೊತ್ತಿಗೆ ವಾಕ್ಚಿತ್ರಗಳು ಬಂದು ಕಾರಂತರ ಚಿತ್ರಕ್ಕೆ ಗಿರಾಕಿಯೇ ಇಲ್ಲದೆ ಹೋಯಿತು. ಕಾರಂತರು ಹೇಳುತ್ತಾರೆ : 'ಆ ನೆನಪನ್ನು ಮರೆತುಕೊಳ್ಳುವುದಕ್ಕಾಗಿ, ಯಾವತ್ತು ಫಿಲ್ಮನ್ನು ತುಂಡು ತುಂಡು ಮಾಡಿ, ನನ್ನ ಬಾಲವನಕ್ಕೆ ಬಂದು ಹೋಗುತ್ತಿದ್ದ ಮಕ್ಕಳಿಗೆ ಹಂಚಿಕೊಟ್ಟೆ'.

ಸಾಹಸ ಶೀಲರಾದ ಕಾರಂತರು ಜಗತ್ತಿನ ಮೂಲೆ ಮೂಲೆ ಸುತ್ತಿದ್ದಾರೆ, ಮರಳು ನಾಡಿನಲ್ಲಿ ಪ್ರಯಾಣ ಮಾಡಿದ್ದಾರೆ, ಹಡಗಿನಲ್ಲಿ ಪ್ರಯಾಣ ಮಾಡುವಾಗ ಭೀಕರ ಚಂಡಮಾರುತದ ಅನುಭವ ಪಡೆದಿದ್ದಾರೆ, ಆಗಲೇ ಹೇಳಿದಂತೆ ಮಲೆನಾಡಿನ ಗಿರಿಜನರೊಂದಿಗೆ ವಾಸ ಮಾಡಿದ್ದಾರೆ. ಕಾದಂಬರಿ, ನಾಟಕ, ಪ್ರಬಂಧ, ಕಥೆ ಆತ್ಮವೃತ್ತ, ವಿಚಾರ ಸಾಹಿತ್ಯ ಎಲ್ಲ ರಚಿಸಿದ್ದಾರೆ. ಅವರಿಗೆ ಜನಪದಕಲೆ ಗೊತ್ತು, ಸಂಗೀತ, ಚಿತ್ರಕಲೆ, ನೃತ್ಯ ಶಿಲ್ಪಕಲೆ ಗೊತ್ತು. ಅದ್ಭುತ ಫೋಟೋಗಳನ್ನು ತೆಗೆದಿದ್ದಾರೆ, ಆಕೃತಿಗಳನ್ನು ಮಾಡಿದ್ದಾರೆ, ನಾಟಕದಲ್ಲಿ ಅಭಿನಯಿಸಿದ್ದಾರೆ. ಅಚ್ಚಿನ ಯಂತ್ರದ ವಿಷಯ, ಅದರ ಮೋಡಿಗಳನ್ನು ಮಾಡುವ ಅತ್ಯಂತ ಆಧುನಿಕ ಪ್ರಯೋಗಗಳ ವಿಷಯ, ತಜ್ಞರೊಂದಿಗೆ ಚರ್ಚೆ ಮಾಡುವಷ್ಟು ಗೊತ್ತು. ಸುಮಾರು ಎಪ್ಪತ್ತನೆಯ ವಯಸ್ಸಿನಲ್ಲಿ ತಾವೇ ಯಕ್ಷಗಾನದ ನಟರಿಗೆ ಅಭಿನಯ ಹೇಳಿಕೊಟ್ಟು ಮಂಡಳಿಯನ್ನು ಕಟ್ಟಿಕೊಂಡು ಭಾರತದ ಹಲವು ಊರುಗಳನ್ನು ತಿರುಗಿದರು. ದೆಹಲಿವರೆಗೆ ಹೋದರು. ಈಗಲೂ ಅವರು ವಿದೇಶ ಪ್ರಯಾಣಕ್ಕೆ ಸಿದ್ಧತೆ ಮಾಡಿಕೊಳ್ಳುತ್ತಿದ್ದಾರೆ. ಕೋಲಾರದ ಕಾಲೇಜಿಗೊಮ್ಮೆ ನಾನು ಅವರನ್ನು ಆಹ್ವಾನಿಸಿದಾಗ, ಕೈಯಲ್ಲಿ ಒಂದು ಚೂರು ಕಾಗದವೂ ಇಲ್ಲದೆ ಅವರು ಜ್ಞಾನದ ಹಲವು ವಿಭಾಗಗಳು-ಸಸ್ಯಶಾಸ್ತ್ರ, ಜೀವಶಾಸ್ತ್ರ, ರಸಾಯನಶಾಸ್ತ್ರ, ಭೌತಶಾಸ್ತ್ರ, ಗಣಿತಶಾಸ್ತ್ರ, ಭೂ ವಿಜ್ಞಾನ ಶಾಸ್ತ್ರ ಮೊದಲಾದವು-ಒಂದೊಂದು ಹೇಗೆ ಅವಲಂಬಿಸಿವೆ ಎಂದು ಪ್ರತಿವಿಜ್ಞಾನ ವಿಭಾಗದ ವಿವರಗಳನ್ನು ಕೊಡುತ್ತ ಒಂದು ಗಂಟೆ ಲೀಲಾಜಾಲವಾಗಿ ಉಪನ್ಯಾಸ ಮಾಡಿದ್ದು ನನಗೆ ಇಂದಿಗೂ ನೆನಪಿದೆ ಬಾಳಿನ ಒಂದೊಂದು ಕ್ಷಣವೂ ಬದುಕಬೇಕು.. ಸಾರ್ಥಕವಾಗಿ ಬದುಕಬೇಕು ಉತ್ಕಟ ಇಚ್ಛೆಯನ್ನು ಕಾರ್ಯಗತ ಮಾಡಿರುವ ಅತ್ಯಂತ ವಿರಳರೀತಿಯ, ಅಸಾಧಾರಣ ಚೈತನ್ಯದ ಚಿಲುಮೆ ಕಾರಂತರು. •

ಕಾರಂತರ ಒಂದು ಶ್ರೇಷ್ಠ ಕಾದಂಬರಿ 'ಅಳಿದ ಮೇಲೆ' ಅದರ ಕೇಂದ್ರ ಪಾತ್ರ ಯಶವಂತ ರಾಯ. ಯಶವಂತರಾಯರು ಆಡುವ ಒಂದು ದೊಡ್ಡಮಾತು, "ಬದುಕಿನ ಲೆಕ್ಕಾಚಾರದಲ್ಲಿ ನಾನು ಕೊಂಡದಕ್ಕಿಂತಲೂ ಕೊಟ್ಟಿದ್ದು ಕಡಮೆಯಾಗಬಾರದೆಂಬ ಭಾವನೆ--ಇದು ಬರಿಯ ಹಣದ ಲೆಕ್ಕಾಚಾರವಲ್ಲ, ಮಾನವನ ಜೀವನದ ಲೆಕ್ಕಾಚಾರ." ಇದು ಕಾರಂತರ ಭಾವನೆಯನ್ನೇ ನಿರೂಪಿಸುತ್ತದೆ ಎನ್ನ

[ 18 ನೆ ಪುಟನೋಡಿ]

# ಸ್ವಾಮಿ ವಿವೇಕಾನಂದರ ಶಕ್ತಿ ಸಂದೇಶ

ಎಂ. ಗಣೇಶ್

'ಶಕ್ತಿಯೇ ಜೀವನ - ಶಕ್ತಿಹೀನತೆಯೇ ಮರಣ' ಶಕ್ತಿಯೇ ಸತ್ಯ, ಏಕ ಮಾತ್ರ ಧರ್ಮ, ದೇವರು. 'ದೌರ್ಬಲ್ಯದ ಪರಿಣಾಮವೇ ಪಾಪಕೃತ್ಯಗಳ ಪ್ರೇರಣೆ' ಆಧ್ಯಾತ್ಮಿಕ, ನೈತಿಕ, ದೈಹಿಕ ಮುಂತಾಗಿ ಹತ್ತು ಹಲವು ವಿಧದ ಶಕ್ತಿಗಳ ಅರ್ಜನೆ ಅತ್ಯಗತ್ಯ.

ವಿಶ್ವದ ಎಲ್ಲ ಜೀವಿಗಳೂ ಯಾವುದೇ ಕಾರ್ಯವನ್ನು ಮಾಡಲು ಶಕ್ತಿ ಅಗತ್ಯ. ಮಾನವನಿಗೆ ದೈಹಿಕ, ಮಾನಸಿಕ, ಆಧ್ಯಾತ್ಮಿಕ ಕ್ರಿಯೆಗಳಿಗೆ ಶಕ್ತಿ ಬೇಕು. ಒಂದು ರಾಷ್ಟ್ರವು ಬಲಿಷ್ಠವಾಗ ಬೇಕಾದರೆ ಶಕ್ತಿ ಬೇಕು.

ಈ ಶಕ್ತಿಯು ಎಲ್ಲಿಂದ ಹೇಗೆ ಪಡೆದು ಹೇಗೆ ಉಪಯೋಗಿಸಿ ನಮ್ಮ ಜನ್ಮವನ್ನು ಸಾರ್ಥಕಗೊಳಿಸಿ, ಆತ್ಮ ಸಾಕ್ಷಾತ್ಕಾರ ಮಾಡಿಕೊಳ್ಳ ಬೇಕೆಂದು ತಿಳಿಯ ಬಯಸುವರಿಗಾಗಿ ಸ್ವಾಮಿ ವಿವೇಕಾನಂದರು ಶಕ್ತಿ ಸಂದೇಶವನ್ನು ಸಾರಿದ್ದಾರೆ. ಈ ಶಕ್ತಿ ಸಂದೇಶವು ಕೇವಲ ಭಾರತೀಯರಿಗೆ ಮಾತ್ರವಲ್ಲ, ಇಡೀ ವಿಶ್ವಕ್ಕೆ. ಇದು ತಾತ್ಕಾಲಿಕ ವಾದವಲ್ಲ, ಸರ್ವಕಾಲಕ್ಕೂ ನಿಲ್ಲುವ ಸರ್ವರಿಗೂ ಅನ್ವಯಿಸುವ ಸ್ಫೂರ್ತಿದಾಯಕ ಸಂದೇಶ. ವಿವೇಕಾನಂದರ ಈ ಶಕ್ತಿ ಸಂದೇಶವನ್ನು ಈ ರೀತಿ ಕ್ರೋಢೀಕರಿಸಿ ಉಲ್ಲೇಖಿಸಬಹುದು.

೧) **ಆಧ್ಯಾತ್ಮಿಕ ಶಕ್ತಿ:—** ಈಶಕ್ತಿ ಸಂದೇಶದ ಹಿನ್ನೆಲೆ ಭಾರತೀಯ ಸಂಸ್ಕೃತಿ "ಯಾವ ಹೊಸ ಶಕ್ತಿಯನ್ನ ಮಾಡಲಾಗುವುದಿಲ್ಲ ಆದರೆ ಇರುವ ಶಕ್ತಿಯನ್ನು ಬೇರೆ ದಿಕ್ಕಿಗೆ ತಿರುಗಿಸಬಹುದು. ಆದ ಕಾರಣ ನಮ್ಮಲ್ಲಿರುವ ಅದ್ಭುತ ಶಕ್ತಿಯನ್ನೇ ಆಧ್ಯಾತ್ಮಿಕ ಕೇವಲ ಪ್ರಾಣಿಯ ಆನಂದಲ್ಲಿ ವ್ಯರ್ಥವಾಗದಂತೆ ಮಾಡಿ ಆ ಶಕ್ತಿಯನ್ನೇ ಆಧ್ಯಾತ್ಮಿಕ ಶಕ್ತಿಯನ್ನಾಗಿ ಪರಿವರ್ತಿಸಬೇಕು."

೨) **ನೈತಿಕ ಶಕ್ತಿ:—** ನೈತಿಕತೆಯಿಲ್ಲದ ಯಾವ ವ್ಯಕ್ತಿಯೇ ಆಗಲಿ, ರಾಷ್ಟ್ರವೇ ಆಗಲಿ ಪರಿಪೂರ್ಣತೆ ಹೊಂದುವುದಿಲ್ಲ. 'ಪ್ರಪಂಚವೆನ್ನುವುದು ಒಂದು ಗರಡಿ ಮನೆಯಿದ್ದಂತೆ. ಇಲ್ಲಿನ ಅಂಗಸಾಧನೆಯ ವಸ್ತುಗಳೆಂದರೆ ಸುಖ ದು:ಖ ಹೊಗಳಿಕೆ-ತೆಗಳಿಕೆ, ಶತ್ರು-ಮಿತ್ರ ಮೊದಲಾದುವು ಇವುಗಳೊಂದಿಗೆ ಅಂಗಸಾಧನೆ ಮಾಡಿದಾಗಲೇ ನೈತಿಕ ಶಕ್ತಿ ಹೆಚ್ಚಾಗುತ್ತದೆ.

೩) **ದೈಹಿಕ ಶಕ್ತಿ:—** ವಿವೇಕಾನಂದರು ಚಿಕ್ಕವರಾಗಿದ್ದಾಗ ಒಮ್ಮೆ ತಮ್ಮ ತಂದೆಯವರಲ್ಲಿ ತಮಗಾಗಿ ಕೊಡುವ ಆಸ್ತಿಯೇನೆಂದು ಕೇಳಿದಾಗ, ವಿವೇಕಾನಂದರ ತಂದೆಯವರು ಅವರನ್ನು ಒಂದು ದರ್ಪಣದ ಮುಂದೆ ಕರೆದೊಯ್ದು ಅವರ ಪ್ರತಿಬಿಂಬ ತೋರಿಸಿ 'ಇದೇ ನಾನು ನಿನಗೆ ಕೊಟ್ಟಿರುವ ಆಸ್ತಿ, (ದೇಹಧಾರ್ಢ್ಯತೆಯನ್ನು ಸೂಚಿಸಿ) ಎಂದರಂತೆ. ವಿವೇಕಾನಂದರು ದೈಹಿಕ ಶಕ್ತಿಯ ಆವಶ್ಯಕತೆಯನ್ನು ಹೇಳಿದ್ದಾರೆ.

೪) **ವ್ಯಕ್ತಿ ಶಕ್ತಿ:—** ಒಬ್ಬ ವ್ಯಕ್ತಿಯು ಪರಿಪೂರ್ಣನಾದ ಶಕ್ತಿ ವಂತನಾಗ ಬೇಕಾದರೆ ಆತನಲ್ಲಿ ಆಧ್ಯಾತ್ಮಿಕ, ನೈತಿಕ, ದೈಹಿಕ ಶಕ್ತಿಯು ಇರಬೇಕು. ಆಧ್ಯಾತ್ಮಿಕ, ನೈತಿಕ, ದೈಹಿಕ ಶಕ್ತಿಗಳ ಸಂಗಮ ಶಕ್ತಿಯೇ ವ್ಯಕ್ತಿ ಶಕ್ತಿ ಯೆನಿಸುತ್ತದೆ.

೫) **ರಾಷ್ಟ್ರ ಶಕ್ತಿ:-**

ಮೇಲೆ ಹೇಳಿದ ಪರಿಪೂರ್ಣ ಶಕ್ತಿ ಪಡೆದ ವ್ಯಕ್ತಿ

ಗಳ ವ್ಯಕ್ತಿ ಶಕ್ತಿಯ ಸಂಗಮವೇ ರಾಷ್ಟ್ರದ ಶಕ್ತಿ. ಒಂದು ರಾಷ್ಟ್ರದಲ್ಲಿ ದಂಗೆ, ಮೋಸ, ಅರಾಜಕತೆಗಳುಂಟಾಗಲು ಕಾರಣ ರಾಷ್ಟ್ರ ಶಕ್ತಿಯ ಕೊರತೆ. ಒಂದು ರಾಷ್ಟ್ರವು ಶಕ್ತಿ ಪೂರ್ಣವಾಗಿದ್ದರೆ, ಆ ರಾಷ್ಟ್ರದ ವ್ಯಕ್ತಿಗಳು ಶಕ್ತಿವಂತರಾಗಿದ್ದಾರೆನ್ನಬಹುದು. ಆದರೆ ಶಕ್ತಿಯಿಲ್ಲದ ವ್ಯಕ್ತಿಗಳ ರಾಷ್ಟ್ರ ಎಂದಿಗೂ ಸಶಕ್ತ ವಾಗಲಾರದು.

೬) ವಿಶ್ವಶಕ್ತಿ:-

ವಿಶ್ವದ ಎಲ್ಲ ರಾಷ್ಟ್ರಗಳು ಸಶಕ್ತವಾಗಿದ್ದರೆ ವಿಶ್ವವೂ ಸಶಕ್ತವಾಗಿರುತ್ತದೆ. ಇಡಿಯ ಮಾನವ ಕೋಟಿ ಸಶಕ್ತ ವಾಗಿರುತ್ತದೆ. ಆದರೆ ವಿಶ್ವವು ವಿಶ್ವಶಕ್ತಿಯನ್ನು ಹೊಂದಿರಬೇಕಾದರೆ ವಿಶ್ವದ ಪ್ರತಿಯೊಬ್ಬ ವ್ಯಕ್ತಿಯೂ ಶಕ್ತಿವಂತನಾಗಿರಬೇಕು. ಮಾನವನಲ್ಲಿ ಆಧ್ಯಾತ್ಮಿಕ, ನೈತಿಕ ಅಥವಾ ದೈಹಿಕ ಶಕ್ತಿಗಳು ಕಡಿಮೆಯಾದರೆ ಇಡಿಯ ವಿಶ್ವವೇ ಅಚೇತನ ವಾಗುತ್ತದೆ. ಅಂದರೆ ಒಟ್ಟಿನಲ್ಲಿ ವಿಶ್ವಶಕ್ತಿಯ ಮೂಲ ವ್ಯಕ್ತಿ ಶಕ್ತಿ, ಯೆಂಬುದರಲ್ಲಿ ಯಾವ ಅನುಮಾನವೂ ಇಲ್ಲ.

ಶಕ್ತಿಯ ಆವಶ್ಯಕತೆ ಅನಂತವಾದದ್ದು ಅನಂಗಾಲವೂ ಆವಶ್ಯಕವಾದದ್ದು. ಈ ಬಗ್ಗೆ ವಿವೇಕಾನಂದರು ವಿಚಾರ ಧಾರೆ ಹೀಗಿದೆ. "ಶಕ್ತಿಯೇ ಜೀವನ" ಶಕ್ತಿಹೀನತಯೇ ಮರಣ' ಶಕ್ತಿಯೇ ಸತ್ಯ, ಏಕಮಾತ್ರ ಧರ್ಮ, ದೇವರು. ದೌರ್ಬಲ್ಯ ನಿವಾರಣೆಗೆ ಶಕ್ತಿ ಅತ್ಯಗತ್ಯ. ವ್ಯಕ್ತಿಯು ಪಾಪದಿಂದ ಮುಕ್ತ ನಾಗಬೇಕಾದರೆ ಶಕ್ತಿ ಅಗತ್ಯ. ದೌರ್ಬಲ್ಯದ ಪರಿಣಾಮವೇ ಪಾಪಕೃತ್ಯಗಳ ಪ್ರೇರಣೆ".

ಶಕ್ತಿಯ ನೆಲೆ?:-

ಶಕ್ತಿಯ ಮೂಲವನ್ನು ಕುರಿತು ವಿವೇಕಾನಂದರು "ದೇವರಲ್ಲಿ ಯಾವಶಕ್ತಿಯಿದೆಯೋ ಯಾವ ಜ್ಞಾನವಿದೆಯೋ' ಇವೆಲ್ಲಾ ನಮ್ಮಲ್ಲಿ ಒಂದು ಪ್ರಮಾಣದಲ್ಲಿರುತ್ತದೆ. ನಮ್ಮ ದೌರ್ಬಲ್ಯವನ್ನು ಕುರಿತು ಸದಾಚಿಂತಿಸುವುದು ಸಲ್ಲದು ಅದಕ್ಕೆ ಬದಲು ಶಕ್ತಿಯನ್ನು ಪಡೆಯಲು ಪ್ರಯತ್ನಿಸಬೇಕು. ನಮ್ಮ ಭಾವನೆಯ ಉದ್ದೇಶವನ್ನು ಯಾವಕಡೆ ಇಲ್ಲದಂತೆ ಹರಿಯ ಬಿಟ್ಟರೆ, ಇದರಿಂದ ಎಷ್ಟೇಶಕ್ತಿಯೂ ವ್ಯಯವಾಗುವದು" ಎನ್ನುತ್ತಾರೆ. ಅಂದರೆ ಶಕ್ತಿಯ ಮೂಲವನ್ನು ಹುಡುಕಿ ಎಲ್ಲೆಲ್ಲೋ ಹೋಗಬೇಕಾಗಿಲ್ಲ. ಶಕ್ತಿ ನಮ್ಮಲ್ಲೇ ಇದೆ ಆದರೆ ಅದು ಯಾವ ರೀತಿ ಉಪಯೋಗಿಸಲ್ಪಡುತ್ತದೆ ಯೆಂಬುದರ ಮೇಲೇ ಅದು ಶಕ್ತಿಹೌದೋ ಅಲ್ಲವೋ ಎಂದು ತಿಳಿಯಬಹುದು.

---

# ಇಲ್ಲಿಳಿದರೇ ಲಾಭ

ಅರಸೀಕೆರೆಯಿಂದ ಹೊರಟ ಪ್ಯಾಸಂಜರ್ ಟ್ರೈನ್ ತಿಪಟೂರು ಸ್ಟೇಷನ್ ತಲುಪಿತು. ಅಲ್ಲಿಂದಲೂ ಭೋಗಿಯೊಂದರಲ್ಲಿ ಬಂದ ಇಬ್ಬರು ಪ್ರಯಾಣಿಕರಲ್ಲಿ ಒಬ್ಬ ಗಡಿಬಿಡಿಯಿಂದ ಪತ್ರಿಕೆ ಮಡಿಚಿಕೊಂಡು ಇಳಿಯುವನಂತೆ ಭೋಗಿಯ ಬಾಗಿಲು ತೆರೆದ, ಆದರೆ ಇಳಿಯಲಿಲ್ಲ, ಪುನಃ ಜಾಗಕ್ಕೆ ಬಂದು ಕೂರಲೂ ಇಲ್ಲ ಡೋಲಾಯಮಾನನಾಗಿ ಓಡಾಡಿದ. ಇದನ್ನು ಕಂಡು ಸಹಪ್ರಯಾಣಿಕ ಕೇಳಿದ "ಎಲ್ಲಿ ಇಳೀಬೇಕಿತು. ಇವ ಉತ್ತರಿಸಿದ ಇಲ್ಲೇ ಇಳೀಬೇಕಿತ್ತೂ, ಆದರೆ ಇವತ್ತಿನ ಭವಿಷ್ಯದಲ್ಲಿ ದೂರ ಪ್ರಯಾಣ ಲಾಭಅಂತಾ ಇದೆ. ಇಲ್ಲೇ ಇಳಿದರೆ ದೂರ ಪ್ರಯಾಣ ಆಗೋದಿಲ್ಲವಾದ್ದರಿಂದ ಬೆಂಗಳೂರಿನಲ್ಲಿ ಇಳಿಯೋಣಾಂತಿದೀನಿ. ಬೆಂಗಳೂರು ಬಲು ದೂರ ಪ್ರಯಾಣವಾಗುತ್ತೆ. ಆದರೆ ನಿಮ್ಮ ಭವಿಷ್ಯದಲ್ಲಿರೋದು ಕೇವಲ ದೂರ ಪ್ರಯಾಣಾಂತ. ಆದ್ದರಿಂದ ನೀವು ಇಲ್ಲಿ ಇಳಿದರೇಲಾಭ.

ಕೆ. ಆರ್. ಗಂಗಾಧರಯ್ಯ

---

# ...ಮಹಾತಪಸ್ವಿ ಶ್ರೇಷ್ಠ ವಚನಕಾರ ಉರಿಲಿಂಗ ದೇವರು.

ಎಸ್. ಎಸ್. ಭೂಸರಡ್ಡಿ,

ವಚನಕಾರರು ವಚನೋಪನಿಷತ್ತಿನ ನಿರ್ಮಿತಿಯಿಂದ ಜನ ಜೀವನದಲ್ಲಿ ಹಲವು ಹೊಸಮೌಲ್ಯಗಳನ್ನು ಹರಡಿದರು. ಲಿಂಗ ಭೇದವಿಲ್ಲದೆ ವಚನ ಸಾಹಿತ್ಯ ರಾಶಿಯನ್ನು ಸೃಜಿಸಿದರು. ಶರಣಸತಿ ಲಿಂಗಪತಿ ಎಂಬಭಾವವನ್ನು ಬಲಿಸಿದರು. ಇಂತಹವರಲ್ಲಿ ಉರಿ ಲಿಂಗದೇವರೂಗಣನೀಯರು. ಅವರ ವ್ಯಕ್ತಿತ್ವವನ್ನು ಮಾನ್ಯ ಲೇಖಕರು ಕೆಲವು ವಚನಗಳ ಹಿನ್ನೆಲೆ ಯಲ್ಲಿ ಮೂಡಿಕೊಟ್ಟಿದ್ದಾರೆ.

ವಿಶ್ವವ್ಯಾಪಕ ನಿತ್ಯನೂತನ ಚಿರಂತನ ಮಾನ ...ಯ ಮೌಲ್ಯಗಳನ್ನು ವಚನ ಸಾಹಿತ್ಯದ ಮುಖಾಂತರ ...ಕೆ ಎತ್ತಿತೋರಿಸಿದ ಹಿರಿಮೆ ಹನ್ನೆರಡನೆಯ ಶತಮಾನ ... ಬಾಳಿಬೆಳಗಿದ ವಚನ ಕಾರರದು. ಕನ್ನಡದ ಉಪನಿಷ ...ಗಳೆಂದು ಹೆಸರಾದ ವಚನ ಸಾಹಿತ್ಯರಾಶಿಗೆ ತಮ್ಮದೇ ... ವಿಶಿಷ್ಟ ಕಾಣಿಕೆ ಸಲ್ಲಿಸಿದವರಲ್ಲಿ ಮಹಾಹಿಮ ...ಲಿಂಗದೇವರು ಅಗ್ರಗಣ್ಯರು, ಅಗ್ರಮಾನ್ಯರು. ಶರಣ ... ಲಿಂಗಪತಿ ಭಾವವನ್ನು ಹೃದಯಂಗಮವಾಗಿ ವಿವರಿ...ರ ಇವರ ವಚನಗಳನ್ನು ಅವಲೋಕಿಸುದೇ ಒಂದು ...ಸ್ಯದ ಗಳಿಗೆಯೆಂದು ಭಾವಿಸಬೇಕು. ಮಹಾಯೋಗಿಣಿ ...ಮಹಾದೇವಿಯವರ ವಚನಗಳಂತೆ ಇವರ ವಚನಗಳು ...ಧು ಮಧುರವಾಗಿ, ಸರಳವಾಗಿವೆ. ಅಂತೆಯೇ ವಚನ ...ಙ್ಮಯ ಕನ್ನಡನಾಡಿನ ಪುಣ್ಯಜೀವನದ ಬೆಳಗಿನಬೆಳಗು. ... ನಮ್ಮ ನಾಡುನುಡಿಯ ಹಿರಿಮೆ, ಸಾಹಿತ್ಯದ ...ಮೆ. ನಿಶೆಯ ನೀರವತೆಯಲ್ಲಿ ನಿಮಗ್ನವಾಗಿದ್ದ ನಾಡು ... ಬೆಳಗಿನಲ್ಲಿ ಎಚ್ಚರಗೊಂಡಿತು. ಜಾತಿ-ಮತ, ...ಶ-ಪ್ರದೇಶದ ಕುಲ-ಗೋತ್ರ, ಮೇಲು-...ು, ಹೆಣ್ಣು-ಗಂಡು ಎಂಬ ಭೇದ ಭಾವನೆಯಿಂದ ... ಮುಕ್ತಗೊಳ್ಳಲು ಯತ್ನಿಸಿದುದು ಈ ...ಂತ್ಯದ ಪ್ರಭಾವದಿಂದ. ಸ್ವಾನುಭಾವದ ಬೀಜವನ್ನು ... ಸಾಮರಸ್ಯದ ಫಲವನ್ನು ಹಡೆದ ಸಾಹಿತ್ಯವಿದು. ...ರ್ಯಕ್ಕೆ ಮಹವನ್ನು ತಂದ ವಾಙ್ಮಯವಿದು. ತತ್ವ ...ರ್ಮ, ಸಮಾಜ, ಸಾಹಿತ್ಯ, ಮುಂತಾದ ಕ್ಷೇತ್ರಗಳಲ್ಲಿ ... ಅನುಪಮವಾದ ಕ್ರಾಂತಿಯನ್ನೆಸಗಿತು. ಆ ಕ್ರಾಂತಿ ... ಫಲವಾಗಿ ಜೀವನದ ಹಲವು ಹೊಸ ಮೌಲ್ಯಗಳು ತಲೆದೋರಿದುವು. ಆಗ ಕರ್ಮ ಕ್ರಿಯೆಯಾಯಿತು ಧರ್ಮ ದಯೆಯಾಯಿತು. ಸೃಷ್ಟಿ ಸತ್ಯವಾಯಿತು. ದೃಷ್ಟಿಲಿಂಗ ವಾಯಿತು. ವ್ಯಷ್ಟಿ ಸಮಷ್ಟಿಯಾಯಿತು. ಶಿವಾನುಭಾವವು ಎಲ್ಲೆಲ್ಲಿಯೂ ವ್ಯೈವತು, ಮಂಗಲವಾಯಿತು. ಅಂತೆಯೇ ವಚನವಾಙ್ಮಯ ಜಾಗತಿಕ ಸಾಹಿತ್ಯದಲ್ಲಿ ಉನ್ನತ ಸ್ಥಾನಪಡೆಯಲು ಅರ್ಹ ವಾಗಿದೆ. ಎಂಬ ಮುತ್ತಿನಂತಹ ಮಾತುಗಳು ಮನನೀಯ ವಾಗಿವೆ. ಅಸಂಖ್ಯಾತ ಶಿವಶರಣ ಶರಣೆಯರು ಕಲ್ಯಾಣ ಕ್ರಾಂತಿಯಲ್ಲಿ ಪಾತ್ರವಹಿಸಿ ಅಪಾರವಾದ ವಾಙ್ಮಯ ನಿರ್ಮಿಸಿರುವುದು ಐತಿಹಾಸಿಕ ಸತ್ಯ. ಪ್ರಭುದೇವರೊಬ್ಬರೇ ಎರಡೆಂಬತ್ತು ಕೋಟಿ ವಚನಗಳನ್ನು ಹಾಡಿದರೆಂದು ಉಲ್ಲೇಖಿಸಿರುವುದು ವಚನ ವಾಙ್ಮಯದ ವಿಪುಲತೆ ದ್ಯೋತಕ. ಈ ದಿಸೆಯಲ್ಲಿ ಉರಿಲಿಂಗ ದೇವರು ಓರ್ವ ಸಮರ್ಥ ಶ್ರೇಷ್ಠ ವಚನಕಾರರೆಂಬುದರಲ್ಲಿ ಎಳ್ಳಷ್ಟು ಸಂದೇಹವಿಲ್ಲ. ಉಪಲಬ್ಧ ಸಾಹಿತ್ಯದ ಆಧಾರದಿಂದ ಅವರ ಜೀವನ ವಿಚಾರ ಕುರಿತು ಕೆಲವು ಮಾತುಗಳನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ.

ಉರಿಲಿಂಗದೇವರ ಕಾಲ ಸು ೧೧೭೦ ಎಂದು ಕವಿ ಚರಿತಕಾರರು ಗುರುತಿಸಿದ್ದಾರೆ. ನೀಲಕಂಠಾಚಾರ್ಯ (೧೪೮೫) ನ ಆರಾಧ್ಯ ಚರಿತ್ರೆಯಲ್ಲಿ ಇವನು ಶಿವಲೆಂಕ ಮಂಚಣ್ಣನ ಮಗನೆಂದು ಹೇಳಲಾಗಿದೆ. ಪಾಲ್ಕುರಿಕೆ ಸೋಮನಾಥನ ಗಣ ಸಹಸ್ರನಾಮಾವಳಿಯ ಸಾಲಿನಲ್ಲಿ ಈತನ ಹೆಸರು ಪೋಣಿಸಲಾಗಿದೆ. ವಿರೂಪಾಕ್ಷ ಪಂಡಿತನ ಚನ್ನಬಸವ ಪುರಾಣದಲ್ಲಿಯ ವರ್ಣನೆ ಇದೆಯಲ್ಲದೆ, ನಿಜಭಕ್ತೆ ನೀಲಲೋಚನೆ ತನ್ನ ಒಂದು ಮಿಶ್ರ ಸ್ತೋತ್ರದ

ವಚನದಲ್ಲಿ ಉರಿಲಿಂಗದೇವರು ಗಣಪತಿ ಲಿಂಗಪತಿ ಯಾದರು ಎಂದು ಸ್ತುತಿಸಿದ್ದಾಳೆ ಇವರು ಬಸವಾದಿ ಪ್ರಮಥರಲ್ಲಿ ಓರ್ವರೆಂದುಗುರುರಾಜ ಚರಿತ್ರೆಯಲ್ಲಿ ಉಲ್ಲೇಖವಾಗಿದೆ (9 – 60). ಶಾಂತಲಿಂಗ ದೇಶಿಕನ ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರ ರತ್ನಾಕರದಲ್ಲಿಯು ಈತನ ಜೀವನ ಚರಿತೆಯ ಕೆಲವು ವಿಚಾರಗಳಿವು.

ಮಹಾರಾಷ್ಟ್ರದ ನಾಂದೇಡಜಿಲ್ಲೆಯ ಕಂಧಾರ ವೆಂಬಗ್ರಾಮ, ಗೋದಾವರಿ ನದಿಯ ತೀರದಲ್ಲಿದೆ. ಅಲ್ಲಿಯೇ ಮಠಾಧಿಪತಿಯೇ ಉರಿಲಿಂಗದೇವರು ಪ್ರಶಾಂತ ವಾದ ಏಕಾಂತವಾದ ವಾತಾವರಣದಲ್ಲಿ ಸದಾಲಿಂಗ ಪೂಜೆಯಲ್ಲಿ ನಿರತನಾದ ವೀರ ವಿರಕ್ತರು. ಅನುಪಮ ಅನುಭಾವಿಗಳು ಮಹಾತಪಸ್ವಿ. ವಾಕ್ಸಿದ್ಧಿ ಪಡೆದಿದ್ದರು. ಹೆಬ್ಬುಲಿನಿಸು ಕ್ರೂರಪ್ರಾಣಿಗಳೂ ಸಹಹಮ್ಮ ವೈರತ್ವಮರೆತು ಸಹಜೀವಿಗಳಾಗಿ ಸುಖ ಸಂತೋಷದಿಂದ ನಲಿಯುತ್ತಿದ್ದವು. ಒಮ್ಮೆ ಕೇಡಿಗಳು ಇವರ ಗುಡಿಸಲಿಗೆ ಬೆಂಕಿ ಇಟ್ಟರು. ಬೆಂಕಿ ಸುತ್ತಲೂ ಆವರಿಸಿಕೊಂಡರೂ ಇಷ್ಟ ಲಿಂಗಪೂಜಾವೈಭವದಲಿದ್ದ ದೇವೋನ್ಮಾದದ ನಿಬ್ಬೆರಗಿನಲ್ಲಿದ್ದ ನಿಜವನರಿದ ನಿಶ್ಚಿಂತನಾಗಿದ್ದ, ಮಹವನರಿದ ಮಹಂತರಾಗಿದ್ದ ಉರಿಲಿಂಗದೇರಿಗೆ ಯಾವ ಅಪಾಯವೂ ತಟ್ಟಲಿಲ್ಲ. ಬೆಂಕಿ ಮುಟ್ಟಲಿಲ್ಲ. ಸ್ವಲ್ಪ ಹೊತ್ತಿನಲ್ಲಿಯೇ ಬೆಂಕಿ ನಂದಿಹೋಯಿತು. ಈ ಮಹಾಘಟನೆಯನ್ನು ಕಣ್ಣಾರೆ ಕಂಡ ದುಷ್ಟರಿಗೆ ಪಶ್ಚಾತ್ತಾಪವಾಯಿತು. ಪರಿಶುದ್ಧ ಮನಸ್ಸಿನಿಂದ ಕ್ಷಮದಾನ ಮಾಡಲು ಬೇಡಿಕೊಂಡರು ಸಕಲ ಜೀವಿಗಳಿಗೆ ಲೇಸನೇ ಬಯಸುವ ಉರಿಲಿಂಗ ದೇವರು ಅವರನ್ನು ಕರುಣೆಯಿಂದ ಕಂಡರು ಅಂತಃಕರುಣಪೂರ್ವಕ ಆಶೀರ್ವದಿಸಿದರು. ಉರಿಲಿಂಗ ದೇವರ ಉಜ್ವಲ ವ್ಯಕ್ತಿತ್ವದ ಪ್ರಭಾವಕ್ಕೆ ಒಳಗಾದರು ಅಸಂಖ್ಯಾತ ಭಕ್ತರು ಅವರಲ್ಲಿ ನಂದವಾಡಿಸಿ ಸೂರಯ್ಯನೂ ಒಬ್ಬನು. ಅತ್ಯಂತ ನಿಷ್ಠಾವಂತ ಭಕ್ತಶಿಖಾಮಣಿ. ಉರಿಲಿಂಗ ದೇವರು ತನಗೆ ದೀಕ್ಷೆನೀಡಲು ಆಮಂತ್ರಿಸಿದ ಲಿಂಗದೀಕ್ಷಾ ಸಮಾರಂಭವು ವಿಜೃಂಭಣೆಯಿಂದ ಜರುಗಿತು. ಮಂಟಪದ ಸುತ್ತಲೂ ನಂದಾ ದೀಪಗಳು ಬೆಳಗುತ್ತಿದ್ದವು. ದೈವಿಕವಾದ ವಾತವರಣ ನಿರ್ಮಾಣಗೊಂಡಿತ್ತು. ದೈವಕೃಪೆಯೇ ಮೂರ್ತಿವೆತ್ತಗುರು, ಸಾತ್ವಿಕಕಳೆಯೇ ಎದುರು ಭಕ್ತ-

ಎಂತಹರೋಮಾಂಚಕ ಸುಂದರ ಸನ್ನಿವೇಶವು. ಅ
ಸಮಯಕ್ಕೆ ಸೂರಯ್ಯನ ಶ್ರೀಮಂತಿಕೆಯನ್ನು ಸ
ಮಾಡಲು ಮಹಕಳ್ಳನೊಬ್ಬ ಬರಬೇಕೇ ಅತನೇ ಪ
ಮನೆಯ ಮೇಲ್ಮಾಳಿಗೆಯು ಕಿಡಿಕಿಯಿಂದ ಲಿಂಗದೀ
ಸಮಾರಂಭದ. ಉರಿಲಿಂಗದೇವರ ಇಷ್ಟಲಿಂಗ ಪೂಜೆ
ಸಡಗರ ಕಣ್ಣಾರೆ ಕಂಡು ವೈಮರೆತು ಹೋದ ಪ
ತಾನು ಲಿಂಗಧಾರಿಯಾಗ ಬೇಕೆಂಬ ಹಂಬಲ ಮನ
ಇಂಬು ಗೊಂಡಿತು. ಶರಣ ಧರ್ಮದ ವ್ಯಾಪಕ ದ
ಉಪಾಸನೆಯ ರಹಸ್ಯದಿಂದ ಆತನ ಹೃದಯವೇ ಸಂಸ್ಕ
ವಾಗಿ ಪರಿವರ್ತನೆಯಾಯಿತು. ಅಂದಿನಿಂದ ಉರಿಲಿ
ದೇವರ ಬೆನ್ನಹತ್ತಿದ ಅದರ ಸೇವಾನು ಸೇವಕನಾದ. ಪ
ದಿನವೂ ಆದರ ದರ್ಶನವಿಲ್ಲದೆ ಊಟ ಮಾಡುತ್ತಿರಲಿ
ಗುರು ಮನೆಗೆ ಉರವಲು ತಂದು ಹಾಕುತ್ತಿದ್ದ. ಹ
ಕೊಡಲು ಹೋದರೆ ನಿರಾಕರಿಸುತ್ತಿದ್ದ. ತನಗೆ ಲಿ
ದೀಕ್ಷೆನೀಡಲು ಬೇಡಿಕೊಳ್ಳುತ್ತಿದ್ದ ಕೊನೆಗೆ ಆತನ ಕ
ಕ್ಕೆ ಬೇಸತ್ತು 'ಛೀ ಉಘಡೆ ಜಾ' ಎಂದು ಅಲ್ಲಿ ಬಿದ
ಕಲ್ಲನ್ನೇ ಆತನ ಕಡೆಗೆ ಎಸೆದು ಬಿಟ್ಟರು ಉರಿಲಿಂಗ ದೆ
ರು. ಪೆದ್ದನಿಗೋ ಸಂತೋಷವೇ ಸಂತೋಷ, ಸಡಗರ
ಸಡಗರ. ಆ ಕಲ್ಲನ್ನೇ ಲಿಂಗವೆಂದು ಭಯ ಭಕ್ತಿಯಿ
ಶ್ರದ್ಧೆನಿಷ್ಠೆಯಿಂದ ಪೂಜಿಸಿದ ಆರಾಧಿಸಿದ.

ಒಂದು ಸಲ ನಂದವಾಡಿಗೆಗೆ ಮಳೆ ಬೀಳ
ಬರಗಾಲಬಿತ್ತು. ಕೆರೆಯೂ ಬತ್ತಿಹೋಯಿತು. ಕುಡಿಯ
ನೀರು ದೊರೆಯದಾಯಿತು. ಎಲ್ಲೆಲ್ಲಿಯೂ ಕೋಲಹಲ
ಕೋಲಾಹಲ. ಅರಸು ಇದ್ದ ಕೆರೆಯಲ್ಲಿ ಬಾವಿಯನ್ನು ತೆ
ಡಿಸಿದ ಎಷ್ಟೋ ತೋಡಿಸಿದರೂ ಗಂಗೆ ಪ್ರತ್ಯಕ್ಷಳಾಗಲಿ
ಸಮಸ್ತ ಜನರು ಉರಿಲಿಂಗ ದೇವರನ್ನು ಬೇಡಿಕೊಂಡ
ಮೂರು, ಗಳಿಗೆಯ ಸಮಯ ಪಡೆದು ಉರಿಲಿಂಗ ದೆ
ರು ಆ ತಾಣದಲ್ಲಿಯೇ ಲಿಂಗಪೂಜೆಯಲ್ಲಿ ನಿರತರಾದ
ಭಕ್ತ ಶಿಖಾಮಣಿ ಪೆದ್ದಣ್ಣ ಗುರು ಕರುಣಿಸಿದ ಲಿ
ರೂಪಿ ಕಲ್ಲಿನ ಸಹಾಯದಿಂದಲೇ ನೀರು ತರಿಸಿದ. ಪ
ತರ ಪೆದ್ದಣ್ಣ ಉರಿಲಿಂಗ ಪೆದ್ದಿಯಾಗಿ, ಶ್ರೇಷ್ಠ ವ
ಕಾರನಾಗಿ, ವೀರಶೈವ ಧರ್ಮ ತತ್ವ ನಿರೂಪಕನ
ಗುರುವಿನ ಕೀರ್ತಿ ಧ್ವಜವನ್ನು ಎತ್ತಿಹಿಡಿದವನು.
ರಿಂದ ಉರಿಲಿಂಗ ದೇವರು ಮಹಾಮಹಿಮರು.

ಐತಿಹಾಸಿಕ ಪ್ರಸಿದ್ಧ ಧಾರ್ಮಿಕ ಮಹಾಪುರುಷರೂ ಎಂಬುದು ವಿದಿತವಾಗುತ್ತದೆ. ಇತ್ತೀಚಿನ ಶಂಸೋಧನೆ ಯಿಂದ ಉರಿಲಿಂಗದೇವನ ಒಂದು ಕಾಲಜ್ಞಾನ ವಚನವೂ ೪೬ ವಚನಗಳು ದೊರೆತಿವೆ. ಅವುಗಳ ಸಮಗ್ರವಾದ ಅಭ್ಯಾಸ ಮಾಡಿದರೆ ಲಿಂಗತತ್ವದ ಅಮೂಲ್ಯ ವಿಚಾರಗಳು ಅವುಗಳಲ್ಲಿ ಮಡುಗಟ್ಟಿ ನಿಂತಿವೆ; ಲಿಂಗಾಂಗ ಸಾಮರಸ್ಯದ ಭಾವಗಳು ತುಂಬಿ ನಿಂತಿವೆ ಎಂದು ಹೇಳಬಹ.ದು. ಆತನ ವಚನಗಳ ಅಂಕಿತ ಉರಿಲಿಂಗದೇವ. ಆರ್ತಭಾವ ದೇವನಿಗೆ ಸಮರ್ಪಣೆ ಮೊದಲಾದ ಅಮೋಘವಾದ ವಾಣಿ ಅಲ್ಲಿ ಮೊಳಗಿದೆ.

"ಅರಿದಡೆ ಶರಣ, ಮ.ರೆದಡೆ ಮಾನವ
ಪಾತಕನು ಹೊಲೆಯ ನಾನೇತಕ್ಕೆ ಬಾತೆ
ಹೊತ್ತಿಗೊಂದು ಪರಿಯ ಗೋಸುಂಬೆಯಂತೆ?
ಈಶನ ಶರಣರ ಕಂಡು ಉದಾಶೀನವ
ಮಾಡುವ ದಾಸೋಹಪನರಿಯದ ದೂಷಕನು
ನಾನಯ್ಯ"

ಇಲ್ಲಿ ನಿಜಭಕ್ತನ ಭಕ್ತಿ ಸಾಧನೆಯು ಕಳಕಳಿಯು ಅನುಭಾವ ಸಿದ್ಧಿಯು ಆತ್ಮಸಂತೃಪ್ತಿಯೂ ಸುವ್ಯಕ್ತವಾಗಿರುವುದು. ಇವರ ವಚನಗಳ ವೈಶಿಷ್ಟ್ಯವೆಂದರೆ ಪರೋಪದೇಶ ಪಾಂಡಿತ್ಯ ಪ್ರದರ್ಶನ ಎಲ್ಲಿಯೂ ಕಂಡುಬರುವುದಿಲ್ಲ. ಮತಪ್ರಕ್ರಿಯೆಯ ಗೋಜು ಗೊಂದಗಳಿಲ್ಲ. ಪ್ರತಿಯಾಗಿ ಸ್ವಾನುಭವ ಸಂಪನ್ನವಾದ ಸಹಜಭಾವದ ಸೊಬಗಿದೆ. ಇವರ ವಚನಗಳಲ್ಲಿ ಸಂಬೋಧಿಸಲಾಗಿರುವ ಕೆಳದಿ ಲಾಕ್ಷಣಿಕವಾಗಿ ನಾಯಿಕೆಯ ಪ್ರಣಯ ಸಹಚರಿಯಾದ ಸಖಿ ಎಂದರೂ ಸರಿಯೇ, ವಚನಕಾರರ ಅಂತರಂಗವೇ ಆತ್ಮವೇ ಆ ಕೆಳದಿ ಅಂದರೂ ಸರಿಯೇ.

ಸಾಧಕನು ಸ್ತ್ರೀಯಿರಲಿ, ಪುರುಷನಿರಲಿ ಆತನ ಒಳಗಿರುವ ಆತ್ಮವು ಹೆಣ್ಣೂ ಅಲ್ಲ ಗಂಡೂ ಅಲ್ಲ; ನಿಜ ಪರಮಾತ್ಮನಿಗಾಗಿ ಹಂಬಲಿಸುವ ಆತ್ಮನಲ್ಲಿ ಹೆಣ್ಣಿನ ಹೃದಯದ ಕೋಮಲ ಭಾವಗಳು ಹೊರಹೊಮ್ಮುತ್ತಿರಬೇಕು. ಸತಿಯು ಪತಿಗಾಗಿ ವಿರಹ ಪಟ್ಟುಕೊಳ್ಳುವಂತೆ. ಆತ್ಮನು ಪರಮಾತ್ಮನನ್ನು ಅಗಲಿರುವೆ ನಲ್ಲ ಎಂಬ ವಿರಹದ ಕೊರಗು ಇವರ ವಚನಗಳಲ್ಲಿ ಸೂಸಿ ಬಂದಿದೆ. ಈ ಬಗೆಯ ಕೆಲವು ವಚನಗಳಿವು:

'ನಲ್ಲನ ಕೂಡಿಹೆನೆಂದು ನೆನೆವನ್ನಬರ
ತವಕದಿಂದ ಮೆಲುವಾಯ್ದು ನೋಡವ್ವಾ
ಮನದೊಳಗೆ ಮನವಾಗಿ ಪ್ರಾಣದೊಳಗೆ ಪ್ರಾಣವಾಗಿ
ಕಾಯದೊಳಗೆ ಕಾಯವಾಗಿ ತವಕಕ್ಕೆ ತವಕ!

ವಿರಹದ ತೀವ್ರತೆ ಹೆಚ್ಚಾಗಿ ಬೇಡಿಕೊಳ್ಳುವ ಪರಿಯಿದು.

'ಆತನ ಬಿರಿದೆನ್ನ ಉರದಲ್ಲಿ ಇದೆ ಕಂಡಯ್ಯ
ಏಕೆ ಬಂದಿರೋ, ಎಲೆ ಅಣ್ಣಗಳಿರಾ ?
ನಿಮಗೆ ಅಪ್ಪುವದಕ್ಕೆಡೆಯಿಲ್ಲ ನೀವಪ್ಪುವಜೆ ಅಡ್ಡಬಂದ
ಏಕೋ ಬಂದಿರೋ, ಉರಿಲಿಂಗದೇವನಪ್ಪಿ ಸೊಪ್ಪಾದ
ಹಿಪ್ಪೆಗೆ.

ಸರ್ವಾಂಗದಲ್ಲಿ ಭಕ್ತಿತುಂಬ ಪೂಜಿಸಬೇಕು, ಕಣ್ಣು ತುಂಬ ನೋಡಬೇಕು, ನಾಲಿಗೆ ತುಂಬಿ ಹಾಡಬೇಕು; ಕಾಲು ತುಂಬ ಕುಣಿಯ ಬೇಕು ; ಮೈತುಂಬಿ ಮಣಿಯ ಬೇಕು, ಕಿವಿತುಂಬಿ ಕೇಳಬೇಕು, ಮನ ದುಂಬಿ ಮೋಹಿಸ ಬೇಕು ; ಪ್ರಾಣತುಂಬಿ ತುಳುಕ ಬೇಕು, ಭಾವತುಂಬಿ ಬೆಳಗ ಬೇಕು, ಅಂದರೆ ಆ ದೇವನ ಒಲುಮೆಗೆ ಪಾತ್ರನಾಗುವನು.

ಈ ಹಿರಿಯ ಹಂಬಲವನ್ನು ಉರಿಲಿಂಗದೇವರ ವಾಣಿಯಲ್ಲಿಯೇ ಕೇಳಿ.

'ಹಾಡುವೆ ನಲ್ಲನ, ಬೇಡುವೆ ನಲ್ಲನ
ಕೂಡುವೆ ನಲ್ಲನ, ನಿಚ್ಚ ನಿಚ್ಚ ನೋಡಾ
ಅವನೇ ಸಖನೆನೆಗೆ ಅವನೆ ಸುಖವೆನೆಗೆ
ಅವನೇ ಪ್ರಾಣವು ಕೇಳಲೆ ಕೆಳದಿ,

ಆ ನಲ್ಲನ್ನು ಸರ್ವಾಂಗದಲ್ಲಿ ತುಂಬಿ ಕೊಂಡುಬಂದ ಮನೋಹರ ಸುಂದರ ಚಿತ್ರವಿದು.

'ನಲ್ಲನ ರೂಪೆನ್ನ ನೇತ್ರವ ತುಂಬಿತ್ತು,
ನಲ್ಲನ ನುಡಿಯನ್ನ ಶ್ರೋತ್ರವ ತುಂಬಿತ್ತು
ನಲ್ಲನ ಸುಗಂಧವೆನ್ನ ಘ್ರಾಣವ ತುಂಬಿತು,
ನಲ್ಲನ ಚುಂಬನವೆನ್ನ ಜಿಹ್ವೆಯ ತುಂಬಿತ್ತು
ನಲ್ಲನಾಲಿಂಗನವೆನ್ನ ಸರ್ವಾಂಗವ ತುಂಬಿತ್ತು,
ನಲ್ಲನ ಅಂತರಂಗ ಬಹಿರಂಗದಲ್ಲಿ ಕೂಡಿ
ಸುಖಿಯಾದ ಉರಿಲಿಂಗದೇವ.'

ಲಿಂಗಕೂಟದ ಲಿಂಗಬೇಟದ ಸವಿಸುಖದ ಸೊಬಗನ್ನು, ಅದೆಷ್ಟು ಅನುಭಾವ ಪೂರ್ವಕವಾಗಿ ನಿವೇದಿಸಿದ್ದಾರೆ,

ಉರಿಲಿಂಗದೇವರು. ದೇವನೊಡನೆ ಒಂದಾದ ಚಂದಾದ ಅವಿನಾಭಾವ ಸಂಬಂಧ ಹೃದಯ ಸ್ಪರ್ಶಿಯಾಗಿದೆ, ಮೇಲಣವಚನದಲ್ಲಿ.

'ವಿಶ್ವವೆಲ್ಲವೂ ಸತಿಯರು, ಸೋಜಿಗದ ಪುರುಷರು
ಅವರವರ ಪರಿಯಲ್ಲಿ ಅವರವರ ನೆರೆವನು
ಅವರವರಿಗವರಂತೆ ಸುಖಮುಮನುನೋಡಾ
ಅವರೆಲ್ಲರ ವಂಚಿಸಿ ಎನ್ನನನಗಲದ ಪರಿಯ
ನೋಡಾ, ಕೆಳದಿ
ನೀನೊಳ್ಳಿದಳಾದರೆ ಮಹಾಮಂತ್ರವ ಜಪಿಸಿ
ನಿನ್ನನಗಲು, ನಿನ್ನಾಣೆ ಉರಿಲಿಂಗದೇವ ತನ್ನಾಣೆ
ಕೆಳದಿ'

ನಂಬು ನಂಬಲೇ ಮನವೇ ನಂಬಿ ಕೆಟ್ಟವರಿಲ್ಲ. ಕೂಡಲ ಸಂಗಮ ದೇವನ ಒಲಿಸ ಬಂದ ಕಾಯ ಕೆಡಿಸಲಾಗದು. ಭಕ್ತಿ, ನಿಷ್ಠೆ, ಶ್ರದ್ಧೆಯಿಂದ ಲಿಂಗ ದೇವನನ್ನು ಮೊರೆಹೋದರೆ ಸಾಕು, ಆತನು ನಿಶ್ಚಿತ ವಾಗಿ ನಲಿದು ಬರುವನು, ಒಲಿದು ಬರುವನು.

ಕಾಯಕ್ಕೆ ಕಾಹ ಕೊಡುವರಲ್ಲದೆ, ಮನಕ್ಕೆ ಕಾಹನು ಕೊಡುವರೆ ಕೆಳದಿ,

ಇಂತಪ್ಪನಲ್ಲನನೆಲ್ಲಿಯೂ ಕಾಣೆ
ಇಂತಪ್ಪ ಪುರುಷನನೆಲ್ಲಿಯೂ ಕಾಣೆ
ಇಂತಪ್ಪ ಚೋದ್ಯವನೆಲ್ಲಿಯೂ ಕಾಣೆ
ಸದ್ಗುಣರ ಕಾಹನು ಎನ್ನಮನಕ್ಕೆ ಕೊಟ್ಟನ
ಉರಿಲಿಂಗದೇವನು.

ಇದೊಂದು ಅತ್ಯಂತ ಉತ್ಕೃಷ್ಟವಚನ. ಅಂಗರಕ್ಷಣೆ ಯಾರನ್ನಾದರೂ ಇಟ್ಟು ಕೊಳ್ಳಬಹುದು. ಹರಿದಾಡು ಚಿತ್ತ ಚಂಚಲವಾದ ಮನಸದ ರಕ್ಷಣೆಯನ್ನು ಯಾರ ಮಾಡಬಲ್ಲರು ! ಆ ದೇವರ ಕೃಪೆಯಿಂದಲೇ ಸದ್ಗು ವೆಂಬ ಮನದ ರಕ್ಷಣೆ ದೊರೆಯಲು ಸಾಧ್ಯವಿದೆ.

ಆಧ್ಯಾತ್ಮನಾದಿಜಿಜ್ಞಾಸುಗಳ, ಅತ್ಯಂತ ಆದರದಿಂ ಬರಮಾಡಿಕೊಳ್ಳುವ ಈ ವಚನಗಳನ್ನು ಒಂದೆ ಸಂಪಾದಿಸುವ ಕಾರ್ಯ ನಡೆದಿದೆ. ಹೊರನಾಡಿನಿಂ ಕನ್ನಡ ನಾಡಿಗೆ ಬಂದು ಕನ್ನಡವನ್ನು ಕಲಿತು ಶ್ರೇಷ ವಚನಗಳನ್ನು ರಚಿಸಿದ ಉರಿಲಿಂಗದೇವರು ಶರ ಸಂಸ್ಕೃತಿಯ ಸೌರಭವನ್ನು ಸೂಸಿದ ಮಹಾನು ಭಾವರ ಮಹಾವಿದ್ವಾಂಸರು. ನೇರವಾದ ನಡೆನುಡಿ, ಸರಳವಾ ವ್ಯಕ್ತಿತ್ವ ಅವರದು. ಮಠದ ಅಧಿಕಾರಿಯಾದರು ಭಕ್ತಿಯ ಸಿರಿಯನ್ನು ಬೆಳೆಯಿಸಿಕೊಂಡ ಧೀಮಂತರು ಅವರ ಔದಾರ್ಯ, ಸರ್ವಸಮತಾಭಾವ, ನಿರಹಂ ಕಾರ ಮೊದಲಾದ ಶ್ರೇಷ್ಠಗುಣಗಳಿಂದ ಅವರ ವ್ಯಕ್ತಿತ್ವ ಬೆಳಗಿದೆ. ಅಕ್ಕನಾಗಮ್ಮ, ಅಲ್ಲಮ ಪ್ರಭು, ಗಜೇ ಮಸಣಯ್ಯ, ಚನ್ನಬಸವಣ್ಣ ಮೊದಲಾದವರ ವಚ ಗಳಲ್ಲಿಯೂ ಈ ಬಗೆಯ ಲಿಂಗ ವಿಕಳಾವಸ್ಥೆಯ ಹೃದ್ ವಾದ ನಿರೂಪಣೆಯನ್ನು ಕಾಣಬಹುದು.





ಮಾತಾಡಿ ಮಾತಾಡಿ ಕಳೆಯುವರು ಕಾಲ
ಒಪ್ಪತ್ತಿನ ಊಟಕ್ಕಾಗಿಮಾಡುವರು ಸಾಲ,
ದುಡಿಯದೇ ಇದ್ದರೂ ಬೇಕು ಇವರಿಗೆಲ್ಲ ಶೋಕಿ
ಕೊನೆಯಲ್ಲಿ ಸುಸ್ತಾಗುವರು ತೀರಿಸಲು ಬಾಕಿ.



ಬಿ. ವಿ. ನಂಜಪ್ಪಬಾಗಿವಾಳು.

# ಆಧ್ಯಾತ್ಮಿಕ ಜೀವನ ಮತ್ತು ಸ್ಕೌಟಿಂಗ್

**ಶಾಲೆಗಳಲ್ಲಿ ಮಕ್ಕಳಿಗೆ ಶಿಸ್ತು-ಸಂಯಮ ಜೀವನವನ್ನು ಬೆಳೆಸುವ ಮಾಧ್ಯಮಗಳಲ್ಲಿ, ಸ್ಕೌಟ್ಸ್, ಗೈಡ್ಸ್ ಮುಂತಾದ ಶಿಕ್ಷಣಗಳು ಮುಖ್ಯ. ಆ ಶಿಕ್ಷಣದೊಂದಿಗೆ ಆಧ್ಯಾತ್ಮಿಕ ಜೀವನಬೆರೆತರೆ ಇನ್ನೂ ಸೊಗಸು.... ಅದನ್ನು ಮಾನ್ಯಲೇಖಕರು ಸ್ಥೂಲವಾಗಿ ವಿವರಿಸಿದ್ದಾರೆ.**



"Prayer is the key the of the morning and the bolt of the evening." (Mahatma Gandhiji-young India 1930)

ಸ್ಕೌಟಿಂಗ್ ಎಂಬದು ಸೌಹಾರ್ದ ಸಾಧನೆಯ ಮಹತ್ತರವಾದ ಒಂದು ವಿಶ್ವಸಂಸ್ಥೆ. ಸಮನ್ವಯ ದೃಷ್ಟಿಯು ಸ್ಕೌಟ್ ಸಂಸ್ಥೆಯ ಜೀವಾಳ. ಜ್ಞಾನ-ಕರ್ಮ ಎರಡು ವಸ್ತು ಆಗಿರಲು ಸಾಧ್ಯವಿಲ್ಲ. ಒಂದೇ ಆಗಿರುತ್ತದೆ. ಜ್ಞಾನಕ್ಕಿಂತ ಕರ್ಮ ಶ್ರೇಷ್ಠ, ಕರ್ಮಕ್ಕಿಂತ ಜ್ಞಾನ ಶ್ರೇಷ್ಠ ಎಂಬುದೇ ತಪ್ಪು. ಕರ್ಮ-ಜ್ಞಾನ-ಆನಂದ ಎಂದರೆ ಸತ್-ಚಿತ್-ಆನಂದ ಮೂರೂ ಒಂದೇ ವಸ್ತು ಎಂಬ ಅನುಭವ ಎಲ್ಲಿ ಬರುತ್ತದೆ ಅಲ್ಲಿ ಆಧ್ಯಾತ್ಮಿಕ ಜೀವನ ಸಂಪೂರ್ಣ ಯಶಸ್ವಿಯಾಗುವುದು.

ಆಧ್ಯಾತ್ಮಿಕ ತಳಹದಿ ಇಲ್ಲದಿದ್ದರೆ ನೈತಿಕ ಜೀವನವು ಕುಗ್ಗಿಹೋಗಿ ವೈಯಕ್ತಿಕ ಪತನದೊಂದಿಗೆ ರಾಷ್ಟ್ರದ ಅವನತಿಯೇ ಆಗಬಹುದು. ಭಗವಂತನೊಬ್ಬನನ್ನು ಶರಣು ಹೊಂದಿದರೆ ಅವನು ಸಮಸ್ತ ಬಂಧನಗಳಿಂದ ಬಿಡಿಸಿ ಮೋಕ್ಷವನ್ನು ಅನುಗ್ರಹಿಸುವನು ಎಂಬ ವಿಷಯ ಎಲ್ಲರೂ ತಿಳಿದಿರುವುದು ಅವಶ್ಯವಾಗಿದೆ.

ಗುರುಗಳು ಶಾಲೆಯಲ್ಲಿ ಬಾಲಕರಿಗೆ ನೀತಿ ಪಾಠ ಹೇಳಿ ಕೊಡುತ್ತಿದ್ದಾರೆ. ಗುರುಗಳು ಆಗ "ತಾಯಿಯು ದೇವರಿಗೆ ಸಮಾನ" ಎಂಬ ನೀತಿ ವಾಕ್ಯವನ್ನು ಉಚ್ಚರಿಸಿದೊಡನೆ ಬಾಲಕರ ಮನಸ್ಸಿನಲ್ಲಿ ಅಷ್ಟೊಂದು ಉತ್ತಮ ಪರಿಣಾಮ ಉಂಟಾಗಲು ಸಾಧ್ಯವಿಲ್ಲ. "ತಾಯಿ ದೇವರಿಗೆ ಸಮಾನ" ಎಂಬ ಗಾದೆಯ ಮಾತಿದೆ ಎಂದೊಡನೆ ಬಾಲಕರ ಮನಸ್ಸಿನಲ್ಲಿ ಯಾರೋ ಒಂದು ಗಾದೆ ಮಾಡಿದ್ದಾರೆ ಅದನ್ನು ಗುರುಗಳು ಹೇಳುತ್ತಿದ್ದಾರೆ ಎಂಬ ಸಾಮಾನ್ಯ ಭಾವನೆ ಉಂಟಾಗುವುದು ಖಂಡಿತ. ಆ ತರಗತಿಯ ಬಾಲಕರು ಕಬ್ಸ್ (cubs) ಆಗಿದ್ದರೆ ಪ್ರತಿದಿನ ಧ್ವಜವಂದನೆಯನು, ಅಭ್ಯಾಸ ಮಾಡುವಾಗ "ಮರಿಯು ಹಿರಿಯರಿಗೆ ವಿಧೇಯನು, ಮರಿಯು ವಿನಯ ಮತ್ತು ನಿರ್ಮಲನು" ಎಂದು ಎರಡು ಸಲ ಉಚ್ಚರಿಸಿದಾಗ ಬಾಲಕರಲ್ಲಿ ಗುರುಗಳು ಹೇಳಿದ ವಿಷಯವು ಶಾಶ್ವತವಾಗಿ ಮನಸ್ಸಿನಲ್ಲಿ ನೆಲೆಗೊಳ್ಳಲು ಸಾಧ್ಯವಾಗುವುದು. ಅಂದಮಾತ್ರಕ್ಕೆ ಕಬ್ ಶಿಕ್ಷಣದಿಂದ ಮಾತ್ರ ಬಾಲಕರಲ್ಲಿ ತಾಯಿಯು ದೇವರಿಗೆ ಸಮಾನ" ಎಂದು ತಿಳಿದು ಕೊಳ್ಳಲು ಸಾಧ್ಯವಿದೆ ಎಂದು ತಪ್ಪು ಅರ್ಥಮಾಡಬಾರದು. ಈ ಸದುದ್ದೇಶವನ್ನು ನಮ್ಮ ಬಾಲಕರಿಗೆ "ಕಬ್" ಶಿಕ್ಷಣ

ವನ್ನು ಕೊಡುವುದರ ಮೂಲಕ ನೆರವೇರಿಸಲು ಸಾಧ್ಯವಿದೆ. ಕಾಡಿನ ಕತೆಗಳಲ್ಲೊಂದಾದ ಮೌಗ್ಲಿಯ ಕತೆಗಳೇ ಕಬ್ ಶಿಕ್ಷಣದ ಹಿನ್ನೆಲೆ. ಕಬ್ ಶಿಕ್ಷಣದ ಕ್ರಮವು ಸ್ಕೌಟ್ ಕ್ರಮಾಚಾರಕೀಯ ಪ್ರಥಮ ಸೋಪಾನ.

ಸ್ಕೌಟ್ಸ್- ಗೈಡ್ಸ್, ರೋವರ್ ರೇಜಂರ್ಸ್ (ಕಾಲೇಜು ವಿದ್ಯಾರ್ಥಿ, ವಿದ್ಯಾರ್ಥಿನಿಯರು) ಸಂಸ್ಥೆಗೆ ಸೇರುವಾಗ – ನಾನು, ೧. "ದೇವರಿಗೂ, ನನ್ನ ದೇಶಕ್ಕೂ ನನ್ನ ಕರ್ತವ್ಯವನ್ನು ಮಾಡುವುದಕ್ಕೂ, ೨. ಇತರರಿಗೆ ಯಾವಾಗಲೂ ಸಹಾಯ ಮಾಡುವುದಕ್ಕೂ ೩. ಸ್ಕೌಟ್ ನಿಯಮದಂತೆ ನಡೆಯುವುದಕ್ಕೂ, ನನ್ನ ಕೈಲಾದ ಮಟ್ಟಿಗೆ ಪ್ರಯತ್ನ ಮಾಡುತ್ತೇನೆಂದು, ನನ್ನ ಗೌರವ ಸಾಕ್ಷಿಯಾಗಿ ಭಾಷೆ ಕೊಡುತ್ತೇನೆ." ಎಂದು ಪ್ರತಿಜ್ಞೆ ಮಾಡುವುದರಿಂದ ಅವರಲ್ಲಿ ದೈವಭಕ್ತಿ, ದೇಶ ಸೇವೆಯ ಮಹತ್ವ ಬಾಲ್ಯದಲ್ಲಿಯೇ ತಿಳಿಯಲು ಸಾಧ್ಯವಾಗುವುದು.

ಬಾಲಕ ಬಾಲಕಿಯರಿಗೆ (ಸ್ಕೌಟ್ಸ್, ಗೈಡ್ಸ್, ಕಬ್ಸ್, ಬುಲ್ ಬುಲ್ಸ್) ಧಾರ್ಮಿಕ ಶಿಕ್ಷಣವನ್ನು ಕೊಡುವುದು ಹೇಗೆ ? ಸಾಹಿತ್ಯ ಅಭ್ಯಾಸ ಮಾಡುವುದು ಧರ್ಮ ಶಿಕ್ಷಣದ ಸಾಲಿಗೆ ಸೇರುವುದಿಲ್ಲ. ಚಾರಿತ್ರ್ಯ, ನಿಷ್ಠೆ, ದೇವರ ವಿಷಯ. ಶ್ರದ್ಧೆಯಿಂದ ಪ್ರಭಾವಿತರಾದ ಸತ್ಪುರುಷರ ಜೀವನವ[illegible] ಅಭ್ಯಸಿಸುವುದರಿಂದಲೇ ಧಾರ್ಮಿಕ ಶಿಕ್ಷಣ ಪಡೆಯ[illegible] ಸಾಧ್ಯವಿದೆ. ಒಟ್ಟಿನಲ್ಲಿ ಶಿಕ್ಷಕರ ಹಾಗೂ ಸ್ಕೌಟರು[illegible] ಯೋಜನೆಯು ಧರ್ಮ ಶಿಕ್ಷಣದ ಸಂಪೂರ್ಣ ಜ್ಞಾನವ[illegible] ಒದಗಿಸುತ್ತದೆಂಬುದು ಪ್ರತಿಯೊಬ್ಬ ವ್ಯಕ್ತಿಯ[illegible] ತಿಳಿದಿರುವುದು ಅವಶ್ಯವಾಗಿದೆ. ಪ್ರತಿಯೊಂದು ವಿಷ[illegible] ವನ್ನು ಅನುಭವದ ಒರೆಗಲ್ಲಿನ ಮೇಲೆ ಪರೀಕ್ಷಿಸ[illegible] ಅಭ್ಯಾಸವನ್ನು ಮಕ್ಕಳಲ್ಲಿ ಬಾಲ್ಯದಿಂದಲೇ ವ[illegible] ಯಾಗುವಂತೆ ನೋಡಿಕೊಳ್ಳುವುದು ಶಿಕ್ಷರ ಹಾ[illegible] ಸ್ಕೌಟ್ ಅಧ್ಯಾಪಕರ ಮುಖ್ಯ ಕರ್ತವ್ಯವಾಗಿರುತ್ತ[illegible] ಇದನ್ನು ಸಾಧಿಸಿದುದೇ ಆದರೆ ಆಧ್ಯಾತ್ಮಿಕ ಶಿಕ್ಷ[illegible] ಬಾಲವೀರರು ಮತ್ತು ಬಾಲವೀರೆಯರಿಗೆ (ಸ್ಕೌಟ[illegible] ಮತ್ತು ಗೈಡ್ಸ್) ಬಾಲ್ಯದಿಂದಲೇ ದೊರಕಿದಂತಾಗುವು[illegible]

ಓಂ ಅಸತೋ ಮಾ ಸದ್ ಗಮಯ।
ತಮಸೋ ಮಾ ಜ್ಯೋತಿರ್ಗಮಯ।
ಮೃತ್ಯೋರ್ ಮಾಽಮೃತಂಗಮಯ॥

ಓಂ, ಅಸತ್‌ನಿಂದ ಸತ್ ಕತ್ತಲೆಯಿಂದ ಬೆಳಕಿ[illegible] ಸಾವಿನಿಂದ ಅಮರತೆಗೆ ಕೊಂಡೊಯ್ಯಲು ಸಹಕಾ[illegible] ಯಾಗುತ್ತದೆ.



---

ಉರಿವ ಕೆಂಡದ ಮೇಲೆ ತೃಣವ ತಂದಿರಿಸಿದರೆ
ಆ ತೃಣವನಾ ಕೆಂಡ ನುಂಗಿದಂತೆ,
ಗುರುಚರಣದಮೇಲೆ ತನುವೆಂಬ ತೃಣವ ತಂದಿರಿಸಿದರೆ,
ಆತನ ಸರ್ವಾಂಗವೆಲ್ಲ ಲಿಂಗ ಕಾಣಾ ರಾಮನಾಥ

—ದಾಸಿಮಯ[illegible]

---

## ಕಾ ವ್ಯ ವಾ ಹಿ ನಿ



# ಸು ಭಾ ಷಿ ತ

**ಎಂ. ಜಿ. ನಂಜುಂಡಾರಾಧ್ಯ**

ಯುಕ್ತಿಯುಕ್ತಮುಮೆನಿಪ ಮಾತನಾಕರ್ಣಿಪುದು
ಮಗುವಿನಿಂದಾದೊಡಂ ಮರೆಮಾಜದೆ ।
ರವಿಗೆ ಕಾಣದ ವಸ್ತು ದೀಪದಿಂ ಕಾಣ್ಬುದೆನೆ
ತಿಳಿವಾರದಾದೊಡೇಂ ಪಡೆಯೊ ಬಿಡದೆ ॥ ೧ ॥

ನಡೆಯಬಾರದು ಮುಂತೆ ಮುಂದಾಳು ತಾನೆಂದು
ಕಾರ್ಯ ಸಿದ್ಧಿಸೆಲೆಲ್ಲ ಫಲವು ಸಮವು ।
ಕಾರ್ಯದೊಳಗಪಜಯಂ ತಲೆದೋರಲಲ್ಲಿಯೇ
ತಳುವದೆಯೆ ಮುಂದಾಳಿಗಕ್ಕುಮಳಿವು ॥ ೨ ॥

ನಿಷ್ಫಲವು ಕಡಲಿನಲಿ ಮಳೆಗರೆವುದೆಂದಿಗುಂ
ನಿಷ್ಫಲವು ತಣಿದವಗೆ ರಸಭೋಜನಂ ।
ನಿಷ್ಫಲವು ದಾನಮುಂ ಧನಿಕನಿಗೆ ನೀಡುವುದು
ನಿಷ್ಫಲವು ಪಗಲಿನೊಳು ದೀಪೋತ್ಸವಂ ॥ ೩ ॥

ಬಿಡಬೇಕು ಜೀವಿಕೆಯು ದೊರೆಯದಿಹ ದೇಶಮಂ
ಬಿಡಬೇಕು ಕಿರುಕುಳದ ಜೀವನಮುಮಂ ।
ಬಿಡಬೇಕು ಮಾಯಾವಿ ಮೈತ್ರಿಯಂ ತಳುವದೆಯೆ
ಬಿಡಬೇಕು ಜೀವಹರಧನಮನೆಂದುಂ ॥ ೪ ॥

ಸಾಲಗುಡುವಾಢ್ಯನುಂ ಸಜ್ಜನರ ಗೋಷ್ಠಿಯುಂ
ಹಿರಿಯ ಜನ ಹರಿವ ನದಿ ವೈದ್ಯರೈವರ್ ।
ಇರದೂರಿನೊಳಗೊಂದು ಅರೆಗಳಿಗೆಯಿರಬೇಡ
ವೆಂದರುಹಿದರೆ ನಮ್ಮ ಗುರುಗಳರಿದರ್ ॥ ೫ ॥

ಯಜಮಾನನಿರದೆಡೆಯು ವಾಸಯೋಗ್ಯಮುಮಲ್ತು
ಬಹುನಾಯಕತ್ವದೊಳಗಿರುವುದೆಂತು ।
ವನಿತೆ ನಾಯಕಳಾಗಲೇನೇನು ವಿಪದಗಳೊ
ಬಾಲ ನಾಯಕನಾಗೆ ಪೇಳ್ವುದೇನು ॥ ೬ ॥

ನಾಳೆ ಯಾರಾರಿಗೇನೇನೇನು ಬರ್ಪುದೆಂ
ದರಿದವರು ತಾನಾರು ಭುವನದೊಳಗೆ ।
ಆದರಿಂದ ಜಾಣನುರೆ ನಾಳೆ ಮಾಳ್ಪುದನೆಲ್ಲ
ಮಿಂದೆಸಗಿ ಮುಗಿಸುವಂ ಭಾತಿಯೊಳಗೆ ॥ ೭ ॥

ಪರರಿಗಾಗಿಯೆ ಕರ್ಮಕೌಶಲಂ ಲೋಕದಲಿ
ಪರರಿಗುಪಕರಿಸುವುದೆ ಪರಮ ಧರ್ಮಂ ।
ಸತ್ಪಾತ್ರದೊಳಗೀವ ದಾನಮೇ ಕಾಮನೆಯು
ಆಸೆ ತೊರೆವುದೆ ನರಗೆ ಮೋಕ್ಷ ಮರ್ಮಂ ॥ ೮ ॥

ಗ್ರಂಥಕೋಟಿಯೊಳೊರೆದ ನೀತಿಜಾತಮನೆಲ್ಲ
ಶ್ಲೋಕಾರ್ಧದೊಳೆಪೇಳ್ವೆ ಕೇಳಿಮೆಲ್ಲಂ ।
ಮೈಮಾತು ಮಾನಸದೆ ಹೆರರಿಗೊಳಿತೆಸಗುವುದೆ
ಪುಣ್ಯಮುಳಿದುದು ಮತ್ತೆ ಪಾಪಮೆಲ್ಲಂ ॥ ೯ ॥

ಭೂತಾನುಕಂಪೆಯುಂ ಗೆಳೆತನಂ ದೀನರಲಿ
ದಾನಮುಂ ಮೃದುಮಧುರಮಾದ ನುಡಿಯುಂ ।
ಇವನುಳಿದು ಲೋಕಮಂ ವಶಪಡಿಸಲೇನುಂಟು
ಗಳಿಸಿದವನಿವ ಜಾಣನೆನಿಪನಿಳೆಯೊಳ್ ॥ ೧೦ ॥

ಯಾರ ಮನೆಯೊಳು ದೋಷಮಿಲ್ಲವಿಲ್ಲಿಯತನಕ
ರೋಗಪೀಡಿತರಾಗದವರು ಯಾರು ।
ವ್ಯಸನಪಡದವರಾರುಮೇನಾದನೊಂದರಿಂ
ಆವಗುಂ ಸುಖಿಯೆನಿಸಿದವರು ಯಾರು ॥ ೧೧ ॥

( 8 ನೇ ಪುಟದಿಂದ)

ಬಹುದು. ನಮ್ಮಲ್ಲಿ ಪ್ರತಿಯೊಬ್ಬ ವ್ಯಕ್ತಿಯೂ-ಅವನು ಎಷ್ಟೇ ಸ್ವತಂತ್ರಮನೋವೃತ್ತಿಯವನಾಗಲಿ, ಯಾರ ಹಂಗೂ ಬೇಡ ಎಂದು ಬದುಕಲಿ—ತನ್ನ ಸಮಾಜದಿಂದ ಎಷ್ಟನ್ನೋ ಪಡೆಯುವುದು ಅನಿವಾರ್ಯ. ಅವನು ಚಿಕ್ಕಂದಿನಲಿ ಓದುಬರಹ ಕಲಿಯುವುದು ಸಮಾಜ ಒಂದು ಶಾಲೆಯನ್ನು ಏರ್ಪಡಿಸಿದ್ದರಿಂದ, ಅದಕ್ಕೆ ಒಂದು ಕಟ್ಟಡವನ್ನು ಒದಗಿಸಿದ್ದರಿಂದ, ಅಲ್ಲಿ ಮೇಷ್ಟರನ್ನು ನಿಯಮಿಸಿದ್ದರಿಂದ. ಅವನು ಊಟಮಾಡಲು ಸಾಧ್ಯವಾಗುವುದು ರೈತ ಬೆಳೆ ಬೆಳೆದದ್ದರಿಂದ, ಅದನ್ನು ಬೇರೆ ಬೇರೆ ಕಡೆಗೆ ಸಾಗಿಸಲು ಅಗತ್ಯವಾದ ಸಾಕಾಣಿಕೆ ವ್ಯವಸ್ಥೆ ಮಾಡುವಷ್ಟು ವೈಜ್ಞಾನಿಕವಾಗಿ, ತಾಂತ್ರಿಕವಾಗಿ ಅವನ ಸಮಾಜವನ್ನು ಅವನ ಹಿಂದಿನವರು, ಸುತ್ತ ಮುತ್ತಲಿನವರು ಬೆಳೆಸಿದ್ದರಿಂದ, ಅವನಿಗೆ ನೀರು ಮನೆಯ ಬಾಗಿಲಿಗೆ ಬರುವುದು ಆ ಸಮಾಜದಿಂದ. ಓಡಾಡಲು ಸಾಧ್ಯವಾಗುವುದು ಸಮಾಜ ರಸ್ತೆಗಳನ್ನು ಮಾಡಿದ್ದರಿಂದ. ಜೊತೆಗೆ, ಅತನನ್ನು ತಾಯಿಯ ಗರ್ಭದಲ್ಲಿ ಸೇರಿದಂದಿನಿಂದ ಎಷ್ಟು ಮಂದಿ ಎಷ್ಟೆಷ್ಟು ಪ್ರಮಾಣದಲ್ಲಿ ಪ್ರೀತಿ, ಸ್ನೇಹ, ಆರೈಕೆಗಳನ್ನು ಕೊಟ್ಟದ್ದರಿಂದ ಅವನೊಬ್ಬ ಮನುಷ್ಯನಾಗಿ, ಯೋಚಿಸುವ ಶಕ್ತಿ ಪಡೆದ ಜೀವಿಯಾಗಿ ಬೆಳೆಯುತ್ತಾನೆ ! ಇದಕ್ಕೆ ಪ್ರತಿಯಾಗಿ ಅವನು ಕೊಟ್ಟದ್ದು ಕಡಿಮೆಯಾಗಬಾರದು. ಮೊದಲಿನಿಂದ ಕಾರಂತರಲ್ಲಿ ಬೆಳೆದು ಬಂದ ನಂಬಿಕೆ ಇದು ಇದರಿಂದಾಗಿ ಅವರು ಸಮಾಜದಲ್ಲಿ ಕಂಡ ಕೊಳಕನ್ನು ತೊಡೆದುಹಾಕಲು ಶ್ರಮಿಸಿದರು. ವೇಶ್ಯೆಯರೆನ್ನಿಸಿಕೊಂಡವರಿಗೆ, ಅವರ ಮಕ್ಕಳಿಗೆ ತಟ್ಟಿದ ಶಾಪದಿಂದ ಅವರನ್ನು ಮುಕ್ತರನ್ನಾಗಿ ಮಾಡಲು, ಹೆಣಗಿದರು. ಮಕ್ಕಳಿಗೆ ಸರಿಯಾದ ಶಿಕ್ಷಣ ದೊರಕಬೇಕೆಂಬ ಬಯಕೆಯಿಂದ ತಾವೆ 'ಬಾಲವನ' ವನ್ನು ಪ್ರಾರಂಭಿಸಿದರು, ಬೇಕಾದಷ್ಟು, ಹಣ ಖರ್ಚುಮಾಡಿದರು. ಮಕ್ಕಳಿಗೆ ತಾವೇ ಪಠ್ಯ ಪುಸ್ತಕಗಳನ್ನು ಬರೆದರು, ಅಚ್ಚು ಹಾಕಿದರು, ಬೇರೆ ದೇಶದ ಮಕ್ಕಳಿಗೆ ವಿಷಯಗಳನ್ನು ತಿಳಿದು ಕೊಳ್ಳಲು ವಿಶ್ವಕೋಶಗಳಿವೆ, ಕನ್ನಡದ ಮಕ್ಕಳಿಗಿಲ್ಲ ಎಂದು 'ಬಾಲಪ್ರಪಂಚ' ವನ್ನು ರಚಿಸಿದರು. ದೊಡ್ಡವರಿಗಾಗಿ ವಿಜ್ಞಾನ ಪ್ರಪಂಚ (ನಾಲ್ಕು ಸಂಪುಟಗಳಲ್ಲಿ) ವನ್ನು ರಚಿಸಿದರು. ಸುಲಭವಾದ ಬೆಲೆಗೆ ಸಾಮಾನ್ಯ ಜನದ ಪ್ರಯೋಜನಕ್ಕಾಗಿ ಒಂದು ಶಬ್ದಕೋಶ-. ಡಿಕ್ಷನರಿ ಬೇಕೆಂದು ಸಿರಿಗನ್ನಡ ಅರ್ಥ ಕೋಶವನ್ನು ಸಿದ್ಧಮಾಡಿ ಪ್ರಕಟಿಸಿದರು. ಇವೆಲ್ಲದರ ಜೊತೆಗೆ ತಮ್ಮ ಬಿಡಿಬರಹಗಳಲ್ಲಿ, ಕಾದಂಬರಿಗಳಲ್ಲಿ, ಉಪನ್ಯಾಸಗಳಲ್ಲಿ ಸಮಾಜದ ಸಮಸ್ಯೆಗಳನ್ನು, ರೋಗರುಜಿನಗಳನ್ನು ಎತ್ತಿ ತೋರಿಸಿದರು, ನಿರ್ಭಯವಾಗಿ ವಿಶ್ಲೇಷಣೆ ಮಾಡಿದರು. ನಿರ್ಭಯ, ಬೌದ್ಧಿಕ ಪ್ರಾಮಾಣಿಕತೆ, ಇವು ಕಾರಂತರ ನಡೆ ನುಡಿಗಳಲ್ಲಿ ಹಾಸುಹೊಕ್ಕಾಗಿ ಸೇರಿಕೊಂಡು ಬಿಟ್ಟಿವೆ. ಯಾರೇ ಬೇಸರ ಪಡುತ್ತಾರೆಂದು, ಯಾರಿಗೇ ಕೋಪ ಬರುತ್ತದೆಂದು, ತಮಗೆ ದೊರೆಯಬಹುದಾದ ಪ್ರಯೋಜನ ತಪ್ಪಿ ಹೋಗುತ್ತದೆಂದು ಎಂದೂ ಅವರು ತಮಗೆ ಸರಿ ಎಂದು ಕಂಡದ್ದನ್ನು ಅಡಸಿ ಮಾಡದೆ ಬಿಟ್ಟವರಲ್ಲ. ಗಾಂಧೀಜಿಯವರಲ್ಲಿ ಅವರಿಗೆ ಅಪಾರ ಭಕ್ತಿ, ಸಬರಮತಿ ಆಶ್ರಮದಲ್ಲಿ ಕೆಲವು ದಿನಗಳನ್ನು ಕಳೆದರು. ಆದರೆ' ವೇಶ್ಯೆಯರು ಪಾಪದ ಜೀವನದಲ್ಲೇ ಸೆರೆಯಾಗದಂತೆ ಮಾಡಲು ಅವರು ಪ್ರಯತ್ನಿಸಿದಾಗ' ಒಬ್ಬ ವೇಶ್ಯೆಯ ಮಗಳನ್ನು ಯಾರೂ ಮದುವೆ ಮಾಡಿಕೊಳ್ಳಲು ಒಪ್ಪಲಿಲ್ಲ; ಕಾರಂತರು ಗಾಂಧೀಜಿಯವರಿಗೆ ಕಾಗದ ಬರೆದರು—ಏನು ಮಾಡಬೇಕು ? ಗಾಂಧೀಜಿ ಉತ್ತರಿಸಿದರು ಆಕೆ ಆಜೀವ ಬ್ರಹ್ಮಚಾರಿಣಿಯಾಗಿ ಉಳಿಯಲಿ. ನಮ್ಮ ಸಮಾಜದ ಆವರಣದಲ್ಲಿ ಆಕೆಯ ಸ್ಥಿತಿಯಲ್ಲಿ ಇದು ಅವಾಸ್ತವಿಕ ಎನ್ನಿಸಿತು ಕಾರಂತರಿಗೆ. ತಾವೇ ಬೇರೆ ಪರಿಹಾರ ಮಾರ್ಗ ಕಂಡುಹಿಡಿಯಲು ಪ್ರಯತ್ನಿಸಿದರು. ಎರಡು ವರ್ಷಗಳ ಕೆಳಗೆ ತುರ್ತುಪರಿಸ್ಥಿತಿಯಲ್ಲಿ ಹಿಂದೆ ಭಾರತ ಸರ್ಕಾರ ತಮಗೆ ಕೊಟ್ಟಪದ್ಮಭೂಷಣ ಪ್ರಶಸ್ತಿಯನ್ನು ಹಿಂದುರಿಗಿಸಿದರು. ಹೆಣ್ಣುಗಂಡಿನ ಸಮಸ್ಯೆ, ಭ್ರಷ್ಟಾಚಾರದ ಸಮಸ್ಯೆ, ದೇವರಲ್ಲಿ ನಂಬಿಕೆಯ ಸಮಸ್ಯೆ ಇಂತಹ ಹತ್ತಾರು ಸಮಸ್ಯೆಗಳನ್ನು, ಓದುಗರಿಗೆ ಕಚುಗಳಿ ಕೊಡುವ ಅಥವಾ ಜನರನ್ನು ಸುಲಭವಾಗಿ ಮೆಚ್ಚಿಸುವ ಪ್ರಯತ್ನ ಮಾಡುದೆ, ಅತ್ಯಂತ ನಿರ್ಭಯವಾಗಿ, ಪ್ರಾಮಾಣಿಕವಾಗಿ, ಬೌದ್ಧಿಕವಾಗಿ ವಿಶ್ಲೇಷಿಸಿದ್ದಾರೆ ತಮ್ಮ ಕಾದಂಬರಿಗಳಲ್ಲಿ ಮತ್ತು ಇತರ ಬರಹಗಳಲ್ಲಿ (ಅವರಿಗೆ ಸ್ವತಃ ದೇವರಲ್ಲಿ ನಂಬಿಕೆ ಇಲ್ಲ. ಆದರೆ ಪ್ರಾಮಾಣಿಕವಾಗಿ ದೇವರಲ್ಲಿ ನಂಬಿಕೆ ಇಟ್ಟುಕೊಂಡು ಅದರಿಂದ ಬಾಳಿನಲ್ಲಿ ಸ್ಥೈರ್ಯವನ್ನು ಪಡೆದುಕೊಂಡು ನಿರ್ಮಲ ಜೀವನವನ್ನು ನಡೆಸುವವರನ್ನು ಕಂಡರೆ ಯರಿಗೆ ಅತ್ಯಂತ ಗೌರವ ಅಂತ

ಹ ಪಾತ್ರಗಳನ್ನು ಅವರು ಕಾದಂಬರಿಗಳಲ್ಲಿ ಚಿತ್ರಿಸಿ
ದ್ದಾರೆ.) ಈ ಎಲ್ಲ ಪ್ರಯತ್ನಗಳಲ್ಲಿ ಅವರು ಸಾಕಷ್ಟು
ಶ್ರಮ ಪಟ್ಟಿದ್ದಾರೆ, ಹಣವನ್ನು ಕಳೆದುಕೊಂಡಿದ್ದಾರೆ.
ಇಲ್ಲಿ ಒಂದೇ ಉದಾಹರಣೆಯನ್ನು ಕೊಡುತ್ತೇನೆ. ಪ್ರಪಂ
ಚ ಎಷ್ಟು ವೇಗವಾಗಿ ಮುಂದುವರಿಯುತ್ತಿದೆ, ಮನು
ಷ್ಯನಿಗೆ ಲಭ್ಯವಾದ ಜ್ಞಾನವನ್ನು ಕನ್ನಡದ ಜನಕ್ಕೆ ಅವ
ರ ಭಾಷೆಯಲ್ಲೇ ಲಭ್ಯಮಾಡಿಕೊಟ್ಟರೆ ಎಷ್ಟು ಪ್ರಯೋ
ಜನವಾದಿತಲ್ಲ ಎಂಬ ಯೋಚನೆ ಬಹುಕಾಲದಿಂದ ಅವ
ರಿಗೆ. ಇದಕ್ಕಾಗಿ ಒಂದು ಕನ್ನಡ ವಿಶ್ವಕೋಶವನ್ನು ರಚಿ
ಸುವ ಯೋಜನೆ, ಒಮ್ಮೆ ಎಂಟು ಹತ್ತು ಮಂದಿ
ವಿದ್ವಾಂಸಮಿತ್ರರನ್ನು ಕಲೆಹಾಕಿ ಈ ವಿಷಯವನ್ನು
ಚರ್ಚಿಸಿದರು. ಒಬ್ಬೊಬ್ಬರು ಎರಡೆರಡು ವಿಷಯಗ
ಳನ್ನು ಆರಿಸಿಕೊಂಡು ಪುಸ್ತಕಗಳನ್ನು ಬರೆಯುವುದು
ಎಂದು ನಿರ್ಧರವಾಯಿತು. ಒಂದು ವರ್ಷದಲ್ಲಿ ಯೋಜ
ನೆಗನುಗುಣವಾಗಿ ಎರಡು ಪುಸ್ತಕಗಳನ್ನು ಬರೆದವರೆಂದರೆ
ಕಾರಂತರೊಬ್ಬರೇ. ತಾವೇ ವೈಜ್ಞಾನಿಕ ವಿಷಯಗಳನ್ನು
ತಿಳಿಸಿಕೊಡುವ ಒಂದು ವಿಶ್ವಕೋಶವನ್ನು ರಚಿಸಬೇಕು
ಎಂದು ತಿರ್ಮಾನಿಸಿದರು. ಐದು ಸಂಪುಟಗಳ ಒಂದು
ವಿಶ್ವಕೋಶದ ಯೋಜನೆಯನ್ನು ಹಾಕಿಕೊಂಡರು. ನೂ
ರಾರು ರೂಪಾಯಿಗಳನ್ನು ಖರ್ಚುಮಾಡಿ ಪುಸ್ತಕಗಳನ್ನು
ಕೊಂಡರು. ಹಲವುವಿದೇಶೀ ಸಂಸ್ಥೆಗಳಿಗೂ ಬರೆದು
ಪುಸ್ತಕಗಳನ್ನು ಚಿತ್ರಗಳನ್ನು ಪಡೆದರು. ಒಂದೊಂದು
ಸಂಪುಟದ ಮುದ್ರಣಕ್ಕೆ ಹದಿನೈದರಿಂದ ಇಪ್ಪತ್ತು ಸಾವಿರ
ರೂಪಾಯಿಗಳ ವೆಚ್ಚತಗುಲುತ್ತಿತ್ತು. ಸಾಲಮಾಡಿ ಹಣ
ವನ್ನು ತಂದರು. ಒಂದು ಸಂಪುಟವನ್ನು ಅಚ್ಚು ಮಾಡಿ
ದ್ದಾಯಿತು. ಸಾವಿರಾರು ರೂಪಾಯಿಗಳ ಸಾಲ ತಲೆಯ
ಮೇಲೆ ಹೊತ್ತಿತು. ಸ್ನೇಹಿತರ ಸಲಹೆಯಂತೆ ಮೈಸೂರು
ಸರ್ಕಾರದ ಸಹಾಯ ಕೇಳಿದ್ದಾಯಿತು, ಏನೂ ಸಿಕ್ಕಲಿಲ್ಲ.
ಸ್ನೇಹಿತರೊಬ್ಬರು ಕೇಂದ್ರದ ವಿದ್ಯಾಮಂತ್ರಿಗಳನ್ನು
ನೋಡಿ ಎಂದು ಸಲಹೆಮಾಡಿದರು. ತಾವೇ ಮಂತ್ರಿಗ
ಳೊಂದಿಗೆ ಮಾತನಾಡಿ ಭೇಟಿಗೆ ದಿನ ಗೊತ್ತು ಮಾಡಿ
ಕೊಟ್ಟರು. ಕಾರಂತರು ಮಂತ್ರಿಗಳನ್ನು ನೋಡಲು
ಹೋದರೆ ಮಂತ್ರಿಗಳು 'ಯಾತಕ್ಕೆ ಬಂದಿರಿ ? ' ಎಂದು
ಕೇಳಿದರು ! ಯಾರೋ ಸ್ನೇಹಿತರು ಶ್ರಮವಹಿಸಿ ಕೇಂದ್ರ
ಸರ್ಕಾರದಿಂದ ಎರಡು ಸಂಪುಟಗಳಿಗೆ ತಲಾ ಐದು ಸಾವಿರ
ರೂಪಾಯಿ ಬರುವಂತೆ ಮಾಡಿದರು. ಇದೇ ಕಾಲದಲ್ಲಿ
ಕಾರಂತರ ಅಚ್ಚುಕೂಟದ ಕೆಲಸಗಾರರು ಮುಷ್ಕರ ಹೂಡಿ
ದರು. ಐದು ಸಂಪುಟಗಳ ಬದಲು ನಾಲ್ಕೇ ಸಂಪುಟ
ಮಾಡುವುದೆಂದು ಕಾರಂತರು ತೀರ್ಮಾನಿಸಿದರು. ಯೋ
ಜನೆ ಮುಗಿಯುವ ಹೊತ್ತಿಗೆ ಇಪ್ಪತ್ತು—ಮೂವತ್ತು
ಸಾವಿರ ರೂಪಾಯಿಸಾಲ ಏರಿತ್ತು. ಸಂಪುಟಕ್ಕೆ ಇಪ್ಪತ್ತು
ರೂಪಾಯಿ ಬೆಲೆ. ಕಾರಂತರು ಎಲ್ಲ ಹೈಸ್ಕೂಲುಗಳಿಗೂ
ಕಾಗದ ಬರೆದರು. ದೊರೆತ ಪ್ರತಿಫಲವನ್ನು ಕಾರಂತರು
ಹೀಗೆ ವರ್ಣಿಸಿದ್ದಾರೆ. "ಕೇವಲ ಒಂದೇ ಒಂದು ಸಂಪು
ಟಕ್ಕೂ ಆ ಶಾಲೆಗಳಿಂದ ಬೇಡಿಕೆ ಬರಲಿಲ್ಲ. ಆಗ ಮನ
ಸ್ಸಿಗನ್ನಿಸಿತು—ಯಾರಸಲುವಾಗಿ ನಾನು ಇಷ್ಟೆಲ್ಲ ಕೆಲಸ
ಕೈಗೊಂಡೆನೋ ಅವರಿಗೇನೇ ಅದು ಬೇಡವಾದರೆ ಮುಂದೆ
ನಾನು ಏನು ಮಾಡುವಂತಿಲ್ಲ ಎಂದು "

ಕಾರಂತರು ಎಷ್ಟೊಂದು ಯೋಜನೆಗಳನ್ನು ಹಾಕಿ
ಕೊಂಡು ತಮ್ಮ ಶಕ್ತಿಯನ್ನು, ಬಾಳಿನ ಅಮೂಲ್ಯ ವರ್ಷ
ಗಳನ್ನು, ಹಣವನ್ನು ವ್ಯಯಿಸಿದ್ದಾರೆ ! (ವಿಜ್ಞಾನ
ಪ್ರಪಂಚದ ಸಂಪುಟಗಳನ್ನು ಅವರು ಬಿಟ್ಟಿಯಾಗಿ
ಕೊಟ್ಟು ಬಿಟ್ಟದ್ದುಂಟು.) ಎಷ್ಟೂ ಯಾಕೆ? "ಬದುಕಿನ
ಲೆಕ್ಕಾಚಾರದಲ್ಲಿ ನಾನು ಕೊಂಡುದಕ್ಕಿಂತಲೂ ಕೊಟ್ಟದ್ದು
ಕಡಿಮೆಯಾಗಬಾರದೆಂಬ" ಒಂದೇ ಭಾವನೆಯಿಂದ.

ಪಶ್ಚಿಮ ಘಟ್ಟಗಳು, ಸಮುದ್ರ ತೀರ ಇವುಗಳ ಬಳಿ
ಬೆಳೆದ ಬಾಳುವೆ ಕಾರಂತರು ಬೆಟ್ಟದಂತಹ, ಸಮುದ್ರ
ದಂತಹ ವ್ಯಕ್ತಿತ್ವ ಉಳ್ಳವರು. ಅವರ ಪರಿಚಯವಾದ
ಹೊಸದರಲ್ಲಿ ಅವರೊಡನೆ ಇರುವುದು ಸ್ವಲ್ಪ ಕಷ್ಟದ
ಅನುಭವವೆ ಸಾಮಾನ್ಯವಾಗಿ social lubicra-
nts ಎಂದು ನಿತ್ಯ ಜೀವನದಲ್ಲಿ ನಾವು ಬಳಸುವ ಮಾತು
ಗಳು, ರೀತಿಗಳು ಅವರಿಗೆ ಅರ್ಥ ಹೀನ. ಅವರು
'ಬಾಯಾರಿಕೆಗೆ ಏನಾದರೂ ಬೇಕೆ ?' ಎಂದು ಕೇಳಿದರೆ,
'ಏನಿಲ್ಲ, ಪರವಾಯಿಲ್ಲ' ಎಂದರೆ ಅವರಿಗೆ ಸಿಟ್ಟು, 'ಈ
ಅರ್ಥವಿಲ್ಲದ ಮಾತು ಯಾಕಯ್ಯ?' ಎನ್ನುತ್ತಾರೆ.
ಅವರು ನನ್ನನ್ನು ಪುತ್ತೂರಿಗೆ ಮೊದಲ ಬಾರಿಗೆ ಭಾಷಣಕ್ಕೆ
ಆಹ್ವಾನಿಸಿದಾಗ ನನ್ನ ಪರಿಚಯ ಮಾಡಿಕೊಟ್ಟ ರೀತಿ
ಚೆನ್ನಾಗಿ ನೆನಪಿದೆ; "ಇವರು ಎಲ್. ಎಸ್ ಶೇಷಗಿರಿ
ರಾಯರು. ಮಡಕೇರಿ ಕಾಲೇಜಿನಲ್ಲಿ ಇಂಗ್ಲಿಷ್ ಕಲಿಸು
ತ್ತಾರೆ. ಅವರ ವಿಷಯ ನಾನು ಅದು ಇದು ಹೇಳಿ

ಪ್ರಯೋಜನವಿಲ್ಲ ಅವರ ಭಾಷಣದಿಂದ ನಿಮಗೇ ಅವರ ವಿಷಯ ತಿಳಿಯತ್ತದೆ ಈಗ ಅವರು 'ಕಾದಂಬರಿಯ ಜಗತ್ತು' ಎಂಬ ವಿಷಯ ಮಾತನಾಡುತ್ತಾರೆ" !

ಆದರೆ ಕಾರಂತರದು ನಿಜವಾಗಿ ತುಂಬ ಸ್ನೇಹ ಸ್ವಭಾವ. ಜ್ವಾಲಾಮುಖಿಯಂಥ, ಸಿಡಿಲಿನಂತಹ ಮನುಷ್ಯ ಎಂದು ಆಗಾಗ ಎನ್ನಿಸುತ್ತದೆ. ಆದರೆ ಪರಿಚಯವಾಗಿ ಅಧೈರ್ಯ ಹೋದಂತೆ ಹೊಸಬರಿಗೆ ಅವರ ಮೃದು ಸ್ವಭಾವ ಅರ್ಥವಾಗುತ್ತದೆ. ಒಮ್ಮೆ ಧರ್ಮಸ್ಥಳದ ಸಾಹಿತ್ಯ ಸಮ್ಮೇಳನ, ಸರ್ವ ಧರ್ಮ ಸಮ್ಮೇಳನಗಳ ವ್ಯವಸ್ಥೆಯ ಹೊಣೆಯನ್ನು ಕಾರಂತರು ವಹಿಸಿಕೊಂಡಿದ್ದರು. ಭಾಷಣ ಮಾಡಲು ಹೋಗಿದ್ದವರಲ್ಲಿ ನಾನೂ ಒಬ್ಬ. ನಲವತ್ತು ಐವತ್ತು ಮಂದಿ ಅತಿಥಿಗಳಿದ್ದರೂ ಎಷ್ಟು ಅಚ್ಚುಕಟ್ಟಾಗಿ ಏರ್ಪಾಟು ಮಾಡಿದ್ದರೆಂಬುದು ನನಗಿನ್ನೂ ನೆನಪಿದೆ. ಅಂದು ರಾತ್ರಿ ನಾವು ಕೆಲವರು ಒಂದು ಕೊಠಡಿಯಲ್ಲಿ ಮಲಗಿದ್ದೆವು. ಕಾರಂತರು ಹೊರಗೆ ಬಾಗಿಲ ಹತ್ತಿರ ಮಲಗಿದ್ದರು. ರಾತ್ರಿ ಒಂದು ಗಂಟೆ-ಎರಡು ಗಂಟೆಯ ಸಮಯದಲ್ಲಿ ನನ್ನ ಮಗ, ಒಂದೆರಡು ವರ್ಷ ವಯಸ್ಸಿನವನು "ಹಾಲು ಬೇಕೆಂದು ಅತ್ತ. ನಾನು ಗದರಿ ಮಲಗಿಸಿದೆ. ಬೆಳಿಗ್ಗೆ ಕಾರಂತರು ಕೇಳಿದರು; 'ಯಾಕೆ ರಾತ್ರಿ ಮಗು ಅಳುತ್ತಿದ್ದಿತು ?' ನಾನು ಏನೋ ಹೇಳಿ, ಬಚಾವಾದೆ ಎಂದು ಕೊಂಡೆ. ಕಾರಂತರು ಕೊಠಡಿಯಲ್ಲಿ ಮಲಗಿದ್ದವರೊಬ್ಬರು ಬಾಯಿ ಬಿಡಿಸಿ ನಿಜವನ್ನು ತಿಳಿದು ಕೊಂಡರು. ಅನಂತರ ನನ್ನನ್ನೂ ನನ್ನ ಹೆಂಡತಿಯನ್ನೂ ಕರೆದು, ಇಷ್ಟು ಜನಕ್ಕೆ ಇಷ್ಟು ವ್ಯವಸ್ಥೆ ಇರುವಕಡೆ ನಿಮ್ಮ ಮಗುವಿಗೆ ಒಂದು ಲೋಟ ಹಾಲು ಇಲ್ಲ ಎಂದು ಕೊಂಡಿರಾ ?" ಎಂದು ತರಾಟೆಗೆ ತೆಗೆದುಕೊಂಡದ್ದನ್ನು ನಾವಿಬ್ಬರೂ ಇನ್ನೂ ಮರೆತಿಲ್ಲ.

ನಿಜ ಒಮ್ಮೊಮ್ಮೆ ಕಾರಂತರು ಇತರರ ಅಭಿಪ್ರಾಯಗಳಿಗೆ ಸಾಕಷ್ಟು ಗಮನ ಕೊಡುವುದಿಲ್ಲ ಎನಿಸುತ್ತದೆ. ಹಠದಸ್ವಭಾವ ಎನಿಸುತ್ತದೆ. ಅನಂತರ ಯೋಚಿಸಿದಾಗ ತೋರುತ್ತದೆ; ಹಾಗಿಲ್ಲದಿದ್ದರೆ ಅವರು ಇಷ್ಟು ಕ್ರಿಯಾಶೀಲರಾಗುವುದಕ್ಕೆ ಸಾಧ್ಯವಿತ್ತೆ ಎಂದು. ವಿಸ್ತಾರವಾದ ಓದು' ಚಿಂತನೆ, ಕರ್ತೃತ್ವ ಶಕ್ತಿ, ಈ ಮೂರೂ ಒಬ್ಬರಲ್ಲಿ ಸಂಗಮಿಸುವುದು ಅಪೂರ್ವ ; ಸಾಮಾನ್ಯವಾಗಿ ಮನುಷ್ಯರನ್ನು ಡ್ರೀಮರ್ಸ್ ಮತ್ತು ಡೂಯರ್ಸ್ (ಕನಸುಗಾರರು ಮತ್ತು ಕೆಲಸಗಾರರು) ಎಂದು ವಿಂಗಡಿಸುತ್ತಾರೆ. ಓದು, ಚಿಂತನೆ, ಕರ್ತವ್ಯಶಕ್ತಿಗಳ ಜೊತೆಗೆ ಸೃಜನಶೀಲವಾದ ಕಲಾಪ್ರತಿಭೆ ಕಾಣುವುದು ತೀರ ವಿರಳ. ಕಥೆಗಾರ, ಕಾದಂಬರಿಕಾರ, ನಾಟಕಕಾರ, ಚಿತ್ರಗಾರ, ಶಿಲ್ಪಿ, ಸಂಗೀತಗಾರ, ನರ್ತಕ, ನಾಟಕ, ಚಲಿನಚಿತ್ರನಿರ್ದೇಶಕ, ನಿರ್ಮಾಪಕ, ಜಾನಪದಕಲೆ ತಜ್ಞ, ವಿಚಾರಸಾಹಿತ್ಯ ಸೃಷ್ಟಿಕರ್ತ, ವಿಶ್ವಕೋಶಬ್ರಹ್ಮ, ಮುದ್ರಕ, ಪ್ರವಾಸಿ, ವಿಜ್ಞಾನ ಸಾಹಿತ್ಯ ಸೃಷ್ಟಿಕರ್ತ, ಶಿಕ್ಷಕ ಶಿವರಾಮಕಾರಂತರಂತಹ ಅಪೂರ್ವ ವ್ಯಕ್ತಿಯನ್ನು ಕನ್ನಡನಾಡು ಭಾರತಕ್ಕೆ ಕೊಟ್ಟಿದೆ ಎನ್ನುವುದು ಕನ್ನಡನಾಡಿನ ಹೆಮ್ಮೆ. ಕನ್ನಡ ನಾಡು ಅವರನ್ನು ಭಾರತಕ್ಕೆ ಕೊಟ್ಟು ತಾನು ಮರೆತೇ ಬಿಟ್ಟಿತೋ ಎಂದು ತೋರುವಂತಹ ಕಾಲ ಇತ್ತು. ಸದ್ಯ ನಮ್ಮ ಪುಣ್ಯ, ಆ ದಿನಗಳು ಕಳೆದುಹೋದವು- ಅವರ ಕೃತಿಗಳನ್ನು ಸಾಧನೆಗಳನ್ನು ಗಂಭೀರವಾಗಿ ನಾವು ಅಧ್ಯಯನ ಮಾಡುತ್ತೇವೆ ಎನ್ನುವ ದಿನಗಳು ಬಂದರೆ ಅದು ಅವರಿಗೆ ಅರ್ಥಪೂರ್ಣವಾದ ಸನ್ಮಾನ.

— ಎಲ್. ಎಸ್. ಶೇಷಗಿರಿರಾವ್

---

# ದೈವಲೀಲೆ

ಒಬ್ಬೊಬ್ಬರಿಗೆ ಒಂದೊಂದು ಶಕ್ತಿಯನೆ ಕೊಟ್ಟು ।
ಪರಮಾತ್ಮ ತಂದೆಮ್ಮನೀಜಗಕೆ ಬಿಟ್ಟು ॥
ನೋಡುತಿಹ ನಗುನಗುತ ಜಗದಾಟವನ್ನು ।
ಮೇಲು ಕೀಳೆಂತೆಂಬ ಹೋರಾಟವನ್ನು ॥

— ಹೆಗ್ಗವಾಡಿ ಗುರುಸಿದ್ಧಪ್ಪ.

ಕೇರಳದ ಪ್ರೇಮಕವಿ–

# ಕುಮಾರನ್ ಆಸನ್

— ದಯಾನಂದ ತೊರ್ಕೆ

ಕಾಮದ ಕಾವನ್ನು ಕಳೆದುಕೊಂಡ ಪ್ರೇಮಕ್ಕೆ ಅಪಾರ ಶಕ್ತಿಯಿರುತ್ತದೆ. ಅದನ್ನೇ ಕಾವ್ಯದ ಮಾಧ್ಯಮವನ್ನಾಗಿ ಅನೇಕ ಕವಿಗಳು ಬಳಸಿದ್ದಾರೆ. ಅಂತಹವರಲ್ಲಿ ಮಲೆಯಾಳಂನ ಪ್ರೇಮಕವಿಯೆಂದೇ ಖ್ಯಾತರಾದ ಆಸನ್ ಅವರೂ ಒಬ್ಬರು. ಮಲೆಯಾಳಂ ಸಾಹಿತ್ಯದಲ್ಲಿ ರೋಮ್ಯಾಂಟಿಕ್ ಯುಗವನ್ನೆ ಆರಂಭಿಸಿದ ಆಸನ್‌ರವರ ಪರಿಚಯವನ್ನು ಮಾಸ್ಯ ಲೇಖಕರು ಮಾಡಿಕೊಟ್ಟಿದ್ದಾರೆ.

ಇಂದು ನಾವು ಬಾಳುತ್ತಿರುವುದು ಪ್ರೀತಿ ತನ್ನ ಮೌಲ್ಯವನ್ನು ಕಳೆದುಕೋಡ ಪ್ರಪಂಚದಲ್ಲಿ. ಕೃತ್ರಿಮ ತೆಯ ಅಡಿಗಲ್ಲಮೇಲೆ ರೂಪುಗೊಂಡ ಇಂದಿನ ಪ್ರೇಮ ಸಾಮ್ರಾಜ್ಯದಲ್ಲಿ ಸತ್ವವಾಗಲೀ, ಅರ್ಥವಾಗಲೀ ಇಲ್ಲ. ಇದನ್ನು ಪ್ರತಿಬಿಂಬಿಸುವ ನವ್ಯ ಕಾವ್ಯ ಕೂಡ ಸತ್ವವನ್ನು ಕಳೆದುಕೊಂಡ ಬರಡು ಶಬ್ದಜಾಲವೆನ್ನಿಸಿದೆ.

ಆದರೆ ಮಲೆಯಾಳಿಯ ಖ್ಯಾತ ಕವಿ ಕುಮಾರನ್ ಆಸನ್ ತಮ್ಮ ಕಾವ್ಯದಲ್ಲಿ ಸತ್ವಭರಿತವಾದ ಪ್ರೀತಿಯನ್ನು ಹೊರಹೊಮ್ಮಿದವರು. ಪ್ರೀತಿಯ ಹಲವು ಮುಖಗಳನ್ನು ತೋರಿಸಿ ಪ್ರಬುದ್ಧತೆಯನ್ನು ಮೆರೆದ ಇವರು ಒಬ್ಬ ಶ್ರೇಷ್ಠ ಕವಿಯೆಂದು ಹೆಸರಾದರು. "ಪ್ರೇಮವೇ ಜೀವನ, ಪ್ರೇಮವೇ ಕಾವ್ಯ, ಪ್ರೇಮವೇ ಜಗತ್ತು" ಎಂದು ಸಾರಿದ ಇವರು ಪ್ರೇಮಕವಿ ಎಂದು ಬಿರುದು ಹೊತ್ತು ಖ್ಯಾತಿಗೊಂಡರು.

೧೮೭೩ರ ಏಪ್ರಿಲ್ ೧೨ ರಂದು ಜನಿಸಿದ ಆಸನ್‌ರ ಜನ್ಮಸ್ಥಳ ಕೇರಳದ ತ್ರಿವೇಂಡ್ರಂನ ಕೈಕರಾ ಎಂಬುದು. ತಂದೆ ಒಬ್ಬ ಸಾಮಾನ್ಯ ದರ್ಜಿ, ಹೀಗಾಗಿ ಆಸನ್ ಹೆಚ್ಚು ಓದು–ಬರೆಹ ಕಲಿಯಲಾಗದೆ ಒಬ್ಬ ವ್ಯಾಪಾರಿಯಲ್ಲಿ ಗುಮಾಸ್ತರಾಗಿ ದುಡಿಮೆ ಪ್ರಾರಂಭಿಸಿದರು. ಆದರೆ ಇವರ ಅಂತರಂಗದಲ್ಲಿ ಜ್ಞಾನಾರ್ಜನೆಯ ಹಸಿವು ದಿನೇದಿನೇ ಬೆಳೆಯತೊಡಗಿತ್ತು. ಕೆಲವೇ ಸಮಯದಲ್ಲಿ ಅಂದರೆ ೧೬ನೇ ವರ್ಷದಲ್ಲಿ ಉದ್ಯೋಗ ಬಿಟ್ಟು ಸಂಸ್ಕೃತ ಅಭ್ಯಾಸಕ್ಕಾಗಿ ಸಂಸ್ಕೃತ ಕಾಲೇಜು ಸೇರಿದರು. ಮುಂದೆ ಎರಡೇ ವರ್ಷದಲ್ಲಿ ಸಂಸ್ಕೃತ ಅಧ್ಯಾಪಕರಾದರು.

ಈ ಅವಧಿಯಲ್ಲಿ ಆಸನ್ ಅವರಿಗೆ ಶ್ರೀ ನಾರಾಯಣ ಗುರು ಎನ್ನುವವರ ಪರಿಚಯವಾಯಿತು. ಶ್ರೀ ನಾರಾಯಣಗುರು ಆಗ ಒಬ್ಬ ಸುಪ್ರಸಿದ್ಧ ಸಮಾಜ ಸೇವಕರೆಂದು ಹೆಸರಾಗಿದ್ದರು. ಇವರ ಸಂದರ್ಶನದ ಪ್ರಭಾವ ಆಸನ್ ಅವರ ಮೇಲೆ ಆತಿಯಾಗಿ ಆಗಿ ಅವರ ಜೀವನದ ದಿಸೆಯೇ ಬದಲಾಯಿಸಿತು ಗುರು ಆಸನ್‌ಗೆ ಗುರುವಾಗಿ ಮಾರ್ಪಟ್ಟರು. ಆಸನ್ ಅವರದು ಹಿಂದುಳಿದ ಸಮಾಜ. ಆಗ ಕೇರಳದಲ್ಲಿ ಇವರ ಸಮಾಜವನ್ನು ಅಸ್ಪೃಶ್ಯರೆಂದು ಭಾವಿಸಿ ಅವರನ್ನು ಸಾರ್ವಜನಿಕರಿಂದ ದೂರಿರಿಸಲಾಗುತ್ತಿತ್ತು ಸರ್ಕಾರಿ ನೌಕರಿಯಲ್ಲಾಗಲಿ, ಸಾರ್ವಜನಿಕ ಕ್ಷೇತ್ರಗಳಲ್ಲಾಗಲಿ ಇವರಿಗೆ ಸ್ಥಾನವಿರಲಿಲ್ಲ. ಈ ನೀತಿಯ ವಿರುದ್ಧ ನಾರಾಯಣಗುರು ಹೋರಾಟ ನಡೆಸಿದ್ದರಿಂದ ಆಸನ್ ಕೂಡ ಅವರ ಹೆಗಲಿಗೆ ಹೆಗಲು ಹಚ್ಚಿದರು. ಆಗ ಇವರಿಗೆ ಬೆಂಗಳೂರಿನ ಡಾ|| ಪಲ್ಪು ಎನ್ನುವವರ ಪರಿಚಯವಾಯಿತು ಡಾ|| ಪಲ್ಪು ಕೂಡ ಹಿಂದುಳಿದವರ ಕಲ್ಯಾಣಕ್ಕಾಗಿ ಹೋರಾಡುತ್ತಿದ್ದ ಒಬ್ಬ ಕಾರ್ಯಕರ್ತ. ಮೂವರೂ ಸಮಾಜಸೇವೆಯ ಕಾರ್ಯಕ್ಕೆ ಇಳಿದರು.

ನಾರಾಯಣಗುರು ಸಮಾಜಕಾರ್ಯಕರ್ತರಾಗಿದ್ದರೂ ಅವರೊಬ್ಬ ಸನ್ಯಾಸಿ. ಅವರಿಗೆ ಅವರದೇ ಆದ ಆಶ್ರಮವೊಂದು ಅರುವೀಪುರದಲ್ಲಿ ಇತ್ತು. ಗುರುಗಳ ಕೋರಿಕೆಯ ಮೇರೆಗೆ ಆಸನ್ ಆಶ್ರಮದಲ್ಲಿ ಮೂರು ವರ್ಷ ಉಳಿದು ವೇದಾಂತ ಮತ್ತು ಯೋಗಸಿದ್ಧಾಂತವನ್ನು ಅಭ್ಯಸಿಸಿದರು.

೧೮೯೦ ರಲ್ಲಿ ಆಸನ್ ಬೆಂಗಳೂರಿಗೆ ಬಂದು ಡಾ|| ಪಲ್ಪುರವರಲ್ಲಿ ಉಳಿದು ಸಂಸ್ಕೃತದ ಹೆಚ್ಚಿನ ಅಭ್ಯಾಸಕ್ಕೆ ತೊಡಗಿದರು. ಆದರೆ ಮುಂದೆ ಸ್ವಲ್ಪ ದಿನದಲ್ಲಿ

ಹಲ್ವು ಯುರೋಪಿಗೆ ತೆರಳಿದ್ದರಿಂದ ಆಸನ್ ಮದ್ರಾಸ್, ಕಲ್ಕತ್ತಾಗಳಿಗೆ ಹೋದರು. ಈ ಪರಪ್ರಾಂತಗಳಲ್ಲಿ ಅವರು ಇಂಗ್ಲೀಷ್, ತಮಿಳು ಭಾಷೆಗಳನ್ನು ಕಲಿತು ಅವುಗಳ ಸಾಹಿತ್ಯವನ್ನೂ ಅಭ್ಯಾಸಿಸಿದರು ಬಂಗಾಲಿ ಸಾಹಿತ್ಯ ವನ್ನು ಅರಿತು ರವೀಂದ್ರನಾಥ ಟಾಗೋರರ ಕೃತಿಗಳನ್ನು ಅಭ್ಯಾಸಿಸಿದರು.

೧೯೦೦ ರಲ್ಲಿ ಕೇರಳಕ್ಕೆ ಹಿಂದಿರುಗಿದ ಆಸನ್ ನಾರಾಯಣಗುರುವಿನ ಜೊತೆಗೂಡಿ ಅಸ್ಪೃಶ್ಯರ ಉದ್ಧಾರಕ್ಕಾಗಿ ಸಂಘಟಿತ ಹೋರಾಟವನ್ನೇ ಪ್ರಾರಂಭಿಸಿದರು. ಇದರ ಜೊತೆಗೆ ಜನತೆಯಲ್ಲಿ ಬೌದ್ಧಿಕ ಕ್ರಾಂತಿಯನ್ನು ಹುಟ್ಟಿಸಲು ಸಾಹಿತ್ಯದ ಮೂಲಕ ರಂಗಕ್ಕಿಳಿದರು.

ಆಸನ್‌ರದು ಕಾವ್ಯಮಾಧ್ಯಮ ಜನತೆಯ ಹೃದಯ ಪರಿವರ್ತನೆಗೆ ಪ್ರೇಮಕಾವ್ಯವೇ ಇವರ ಅಸ್ತ್ರ. ಇದರ ಫಲವಾಗಿ ಮಲೆಯಾಳಿ ಕಾವ್ಯಕ್ಷೇತ್ರದಲ್ಲಿ ಹೊಸ ಸತ್ವಭರಿತ ಪ್ರೇಮಕಾವ್ಯದ ಪ್ರವಾಹವೇ ಉಕ್ಕಿತು. ಸತ್ವ ಕಳೆದುಕೊಂಡಿದ್ದ ಮಲೆಯಾಳಿ ಕಾವ್ಯ ಪ್ರಪಂಚದಲ್ಲಿ ಹೊಸ ಹುರುಪು ಹುಟ್ಟಿತು. ಪ್ರೇಮ–ಪ್ರೀತಿಯನ್ನು ಅಭಿವ್ಯಕ್ತಗೊಳಿಸುವ ಇವರ ಕಾವ್ಯ ಅಶ್ಲೀಲಕಾವ್ಯವಲ್ಲವೆನ್ನುವುದನ್ನು ನಾವು ಮುಖ್ಯವಾಗಿ ಗಮನಿಸಬೇಕು. ಕೀಳು ಕಾಮನೆಯನ್ನು ವಿರೋಧಿಸುತ್ತಿದ್ದ ಆಸನ್ ಎಂದಿಗೂ ಅಂಥ ಕಾವ್ಯರಚನೆಗೆ ಕೈಯಿಕ್ಕದೆ ಪ್ರೀತಿ–ಪ್ರೇಮವನ್ನು ಪವಿತ್ರ ಶಬ್ದಗಳಲ್ಲಿ ವರ್ಣಿಸಿದ್ದಾರೆ.

ಆಸನ್ ಕಾವ್ಯರಚನೆಗೆ ಕೈಯಿಟ್ಟ ಕಾಲದಲ್ಲಿ ಕೇರಳದಲ್ಲಿ ಅನೈತಿಕತೆ, ಅಪ್ರಾಮಾಣಿಕತೆ ತುಂಬಿತುಳುಕುತ್ತಿತ್ತು. ಆಸನ್ ಸಮಾಜಸೇವಕರಾಗಿ, ಕವಿಯಾಗಿ ಇದರ ವಿರುದ್ಧ ಹೋರಾಟಕ್ಕೆ ನಿಂತು ಕೀಳು ಸಮಾಜದ ಕಣ್ಣು ತೆರೆಸಿದರು.

ಮುಂದೆ ಕಾವ್ಯಮಾಧ್ಯಮಕ್ಕೆ ಹೆಚ್ಚಾಗಿ ಒಲಿದ ಆಸನ್ ೧೯೦೧ ರಲ್ಲಿ ಸೌಂದರ್ಯಲಹರಿ, ೧೯೦೭ ರಲ್ಲಿ ಶಿವಸ್ತೋತ್ರಮಾಲಾ ರಚಿಸಿದರು. ಆದರೆ ಇವು ಅಷ್ಟಾಗಿ ಜನರಿಗೆ ಹಿಡಿಸದ್ದರಿಂದ ಆಸನ್ ನವ್ಯ ಕಾವ್ಯ ರಚನೆಗೆ ಕೈಯಿಟ್ಟರು. ಈ ಮಧ್ಯೆ ಸಮಾಜಸೇವೆಯ ಇವರ ಕಾರ್ಯವ್ಯಾಪ್ತಿ ಅಧಿಕವಾಗಿ ಬೆಳೆದಿದ್ದರಿಂದ ಕಾವ್ಯರಚನೆಯನ್ನು ತೀವ್ರವಾಗಿ ಮಾಡುವದು ಕಷ್ಟವಾಯಿತು. ಮುಂದೆ ೪೫ ವರ್ಷ ಇವರಿಗೆ ಕಾವ್ಯರಚನೆಗೆ ವೇಳೆಯೇ ಸಿಗದಾಯಿತು.

೧೯೦೮ ರಲ್ಲಿ ಆಸನ್ ಕಾವ್ಯಪ್ರಪಂಚಕ್ಕೆ ಮೈ ಕೊಡವಿ ಎದ್ದುಬಂದರು. ಅನಂತರ ಪ್ರಕಟವಾದ 'ವೀಣಾಪೂವು' (ಬಿದ್ದಹೂವು) ಇವರ ಹೆಸರನ್ನು ಪ್ರಸಿದ್ಧಿಗೆ ತಂದಿತು. ನೈತಿಕ ಅಧಃಪತನವಾದ ಒಬ್ಬ ಹುಡುಗಿಯ ಕಥೆ ಇದರ ವಸ್ತು. ಈ ಕವಿತೆಯಿಂದಲೇ ಮಲೆಯಾಳಿ ಸಾಹಿತ್ಯದಲ್ಲಿ ರೋಮ್ಯಾಂಟಿಕ್ ಯುಗ ಪ್ರಾರಂಭವಾಗಿದ್ದು.

೧೯೧೧ ರಲ್ಲಿ ನಲಿನಿ ಮತ್ತು ೧೯೧೪ ರಲ್ಲಿ ಲೀಲಾ ಎಂಬೆರಡು ಇವರ ಪ್ರಖ್ಯಾತ ಕವನಗಳು ಪ್ರಕಟಗೊಂಡವು. ಇವೆರಡೂ ತೀರ ಆಧುನಿಕ (ನವ್ಯ) ಕವನಗಳು ನಲಿನಿಯಲ್ಲಿ ಕಥಾನಾಯಕಿಯ ಪ್ರೇಮೋದ್ಯಾನದ ಚಿತ್ರಣ ಸುಂದರವಾಗಿ ಮೂಡಿ ಬಂದರೆ ಲೀಲಾದಲ್ಲಿ ನಾಯಕ–ನಾಯಕಿಯ ವಿಫಲ ಪ್ರಣಯದ ದುರಂತ ಕಥೆ ಇದೆ. ಇವು ವಾಸ್ತವ ಸಮಾಜದ ಕೈಗನ್ನಡಿಯಾಗಿ ಜನಮನದಲ್ಲಿ ಪ್ರಭಾವ ಬೀರಿದವು. ಜೊತೆಗೆ ಮಲೆಯಾಳಿ ಕಾವ್ಯ ಪ್ರಪಂಚದಲ್ಲಿ ಒಂದು ರೀತಿಯ ಕ್ರಾಂತಿಯನ್ನು ಹುಟ್ಟಿಸಿದವು.

ಆಸನ್ ಅವರ ಜೀವನವೇ ಒಂದು ಕ್ರಾಂತಿಕಾರಕ ಘಟನೆಯಂತಿದೆ, ಇವರು ೪೫ನೇ ವಯಸ್ಸಿನಲ್ಲಿ ೧೭ರ ಕಿಶೋರಿಯನ್ನು ಮದುವೆಯಾಗಿ ಜನನನ್ನು ದಿಗ್ಭ್ರಮೆಗೊಳಿಸಿದರು. ಈ ಸಂದರ್ಭದಲ್ಲಿ ಇವರ "ಹಳ್ಳಿಯ ಮರದೊಳಗಿನ ಹಕ್ಕಿ" ಎಂಬ ಕಾವ್ಯ ಪ್ರಕಟವಾಯಿತು. ಆದರೆ ಇದಾದ ಮೇಲೆ ಇವರಿಂದ ಮೊದಲಿನಂತ ಸತ್ವಯುತ ಕವನಗಳು ರಚನೆಯಾಗಲಿಲ್ಲ.

ಪ್ರರೋದಾನಮ್, ಚಿಂತವಿಸ್ತಾಯಯಸೀತಾ, ಸೀತಾ, ಚಂಡಾಲಭಿಕ್ಷುಕಿ, ಕರುಣಾ ಇವು ಆಸನ್‌ರ ಕೆಲವು ಮುಖ್ಯ ಕೃತಿಗಳು. ಇವುಗಳಲ್ಲಿ ದುರವಸ್ಥಾ ಮತ್ತು ಚಂಡಾಲಭಿಕ್ಷುಕಿ ಕೇರಳದಲ್ಲಿ ಹೆಚ್ಚು ಚರ್ಚೆಗೊಳಗಾದ ಕಾವ್ಯಗಳು. ಕರುಣಾ ಆಸನ್‌ರ ಕೊನೆಯ ಮತ್ತು ಅತ್ಯಂತ ಮಹತ್ವದ ಕೃತಿ. ಚಂಡಾಲಭಿಕ್ಷುಕಿ

(25ನೇ ಪುಟ ನೋಡಿ)

# ಗಮಕ ಕಲೆಯ ವಿಚಾರ

ಗಮಕ ಕನ್ನಡದ ಸಾಹಿತ್ಯದ ಅಸಾಧಾರಣ ಕಲೆ. ಆ ಕಲೆಯ ಸಂವರ್ಧನೆಗಾಗಿ ಕ. ಸಾ. ಪರಿಷತ್ತು ಇತ್ತೀಚೆಗೆ ಅನೇಕ ಯೋಜನೆಗಳನ್ನು ಕೈಗೊಂಡಿದೆ. ಆದರೂ ಅದರ ವಿಚಾರವಾಗಿ ಜನ ಸಾಮಾನ್ಯರಿಗೆ ಶ್ರದ್ಧೆ ಕಡಿಮೆಯಾಗಿದೆ. ಆದ್ದರಿಂದ ಸ್ಪಷ್ಟವಾದ ತಿಳುವಳಿಕೆಯ ಪ್ರಚಾರ ಮಾಡುವುದು ಅಗತ್ಯ— ಈ ಹೆಗ್ಗುರಿಯನ್ನು ಮನದಲ್ಲಿಟ್ಟುಕೊಂಡು ಮಾನ್ಯಲೇಖಕರು ಪ್ರವೃತ್ತರಾಗಿದ್ದಾರೆ.

—ಎಂ. ಜಿ. ವೆಂಕಟೇಶಯ್ಯ

### 1. ಗಮಕ ಕಲೆಯ ವಿಚಾರ:

ಗಮಕ ಎಂಬ ಪದವನ್ನು ಕನ್ನಡ ಭಾಷೆಯಲ್ಲಿ ಉಪ ಯೋಗಿಸಿದಾಗ ಆ ಪದದ ಅರ್ಥವನ್ನು – ಕಾವ್ಯವಾಚನ ರೀತಿ–ಎಂದು ತಿಳಿದು ಕೊಳ್ಳುವುದು ಸಾಮಾನ್ಯ ; ಎಂದ ಮೇಲೆ, ಗಮಕ ಕಲೆಯ ಪ್ರಯೋಜನವೇನು ಎಂದು ಕೇಳಿದಾಗ ಕಾವ್ಯವಾಚನದ ಪ್ರಯೋಜನವನ್ನು ಪ್ರಶ್ನಿಸಿದ್ದಂ ತೆಯೇ ಆಯಿತು.

ಕನ್ನಡ ಸಾಹಿತ್ಯಪರಿಷತ್ತು ಅನೇಕ ಜಿಲ್ಲೆಗಳಲ್ಲಿ ಗಮಕ ಕಾರ್ಯವನ್ನು ಕೈಗೊಳ್ಳಲು ಗಮಕ ವಿದ್ವಾಂಸರನ್ನು (ಖ್ಯಾತ ಗಮಕಿಗಳನ್ನು) ಕಳಿಸಿಕೊಡುತ್ತದೆ. ಅಲ್ಲದೆ ಗಮಕ ಪಾಠಪ್ರವಚನ ಮಾಡುವ ಸಂಪ್ರದಾಯವನ್ನು ಗಮಕವನ್ನು ಕಲಿಸುವ ಉಪಾಧ್ಯಾಯರಿಗೆ ತಿಳಿಸಲು ಆಗಾಗ ಬೇರೆ ಬೇರೆ ಸ್ಥಳಗಳಲ್ಲಿ ತರಬೇತಿಯ ಕೇಂದ್ರಗಳನ್ನು ತೆರೆಯುತ್ತ ಬಂದಿದೆ. ಸಾಮಾನ್ಯಜನರಿಗೆ ಇದರ ವಿಚಾರವಾಗಿ ಪೂರ್ತಿಯಾಗಿ ತಿಳಿದು ಕೊಳ್ಳಲು ಶ್ರದ್ಧೆಕಡಿಮೆ ಎಂದು ಹೇಳ ಬಹುದಾದರೂ ಕೆಲವುಮಂದಿ ಈ ಪ್ರಶ್ನೆಗಳನ್ನು ಹಾಕುತ್ತಾರೆ- ಇಂಥಾ ಅಗತ್ಯವೇನಿದೆ? ಗಮಕ ಕಲೆಯಿಂದ ಕನ್ನಡ ಅಭಾಷೆಗೂ ವಾಙ್ಮಯಕ್ಕೂ ಆಗುವ ಅಂಥಾ ದೊಡ್ಡ ಉಪಕಾರವೇನಿದೆ ?

ಈ ವಿಚಾರವಾಗಿ ಸಾಕಷ್ಟು ತಿಳಿವಳಿಕೆಯನ್ನು ಪ್ರಚಾರಮಾಡುವುದು ಅಗತ್ಯ.

ಉತ್ತರ ಹಿಂದೂಸ್ಥಾನದಲ್ಲಿ ದಕ್ಷಿಣ ದೇಶದ ಭಾಷೆಗಳೆಂದರೆ ಕನ್ನಡವೂ ಒಂದೆಂದು ಬಹುಕಾಲದವರೆಗೆ ಅಲ್ಲಿನ ಜನರಿಗೆ ತಿಳಿದಿರಲಿಲ್ಲ. 1930 ರಲ್ಲಿ ಬೆಂಗಳೂರಿನಿಂದ ಕಲ್ಕತ್ತೆಗೆ ಹೊದ ಕನ್ನಡಿಗನು ಆ ಜನರ ಪಾಲಿಗೆ "ಮದ್ರಾಸಿ !". ಇತ್ತೀಚೆಗೆ ಕರ್ನಾಟಕರಾಜ್ಯದ ಚುನಾವಣೆ ನಡೆದ ನಂತರ ಕನ್ನಡವೂ ಒಂದು ಭಾಷೆ ಎಂಬುದು ಅವರಿಗೆ ತಿಳಿದು ಬಂದಿದೆ. ಈಗ ಡೆಲ್ಲಿಯಲ್ಲಿ **ಅಖಿಲ ಕನ್ನಡ ಸಾಹಿತ್ಯ ಸಂಮೇಳನ**ವಾದ ಮೇಲೆ ಕನ್ನಡಕ್ಕೂ ಒಂದು ಸಾಹಿತ್ಯವಿದೆ ಎಂಬುದು ಉತ್ತರದವರಿಗೆ ಗೊತ್ತಾಗಿದೆ. ಇದಕ್ಕೆ ಕಾರಣ ಪ್ರಚಾರಕಾರ್ಯ. ಕವಿಗೆ ಪ್ರತಿಭೆ, ಜ್ಞಾನ, ಇತ್ಯಾದಿಗಳಜೊತೆಗೆ ಈಗಿನ ಕಾಲದಲ್ಲಿ ಅಡ್ವರ್ಟೈಸ್‌ಮೆಂಟ್ (Advertisement) ಕೂಡ ಆಗಬೇಕು- ಎಂದು ಶ್ರೀಪರಮೇಶ್ವರ ಭಟ್ಟರು ನುಡಿದರು, ಎಷ್ಟೋ ಕಾವ್ಯಗಳು ಸರಿಯಾದ ಪ್ರಚಾರವಿಲ್ಲದೆ ಕಾಲವಶವಾಗಿ ಸದ್ದಿಲ್ಲದಂತೆ ಮಾಯವಾಗಿವೆ.

ನಮ್ಮಲ್ಲಿ ಅನೇಕರಿಗೆ ಕನ್ನಡದಲ್ಲಿ ಯಾವ ಯಾವ ಗ್ರಂಥಗಳಿವೆ ಎಂಬುದು ಪೂರ್ತಿಯಾಗಿ ತಿಳಿದಿಲ್ಲ. ಕನ್ನಡದಲ್ಲಿ ಶತಕಗಳೆಷ್ಟಿವೆ ? ಎಂಬ ಪ್ರಶ್ನೆಯನ್ನು ಯಾರಾದರೂ ಕೇಳಿದರೆ ಬಹು ಮಂದಿಗೆ ಸಮಂಜಸವಾಗಿ ಉತ್ತರವನ್ನು ಕೊಡಲು ಕಷ್ಟಕರ. ಅದೇ ನಾಲ್ಕುಮಂದಿ ಗಮಕಿಗಳು ನಾಲ್ಕಾರು ಶತಕಗಳನ್ನು ಹಾಡಿದ್ದನ್ನು ನಾವು ಕೇಳಿದ್ದಿದ್ದರೆ ತಕ್ಷಣವೇ ಉತ್ತರವು ಈಚೆಗೆ ಬರುತ್ತಿತ್ತು.

ಕಾವ್ಯವಾಚನ ಬೇರೆ ; ಕಾವ್ಯವನ್ನು ನಮ್ಮ ಮಟ್ಟಿಗೆ ನಾವು ಓದಿಕೊಳ್ಳುವುದು ಬೇರೆ.

ಓದಿಕೊಳ್ಳುವ ಮಾನವನಿಗೆ ಶಬ್ದದ ಅರ್ಥ; ಪದ ಜೋಡನೆ ವಾಕ್ಯದ ಅರ್ಥ; ಇತಿವೃತ್ತ (ಕಥೆ) :–ಇವು ಮುಖ್ಯ. ಅವನು ಸಾಮಾನ್ಯವಾಗಿ ಮನಸ್ಸಿನಲ್ಲಿಯೆ ಓದಿ

ಕೊಳ್ಳುತ್ತಾನೆ (Silent Reading). ಅರ್ಥವನ್ನು ಗ್ರಹಿಸಲಾರದೆ ಹೋದಾಗ ಪುನಃ ಓದಿಕೊಳ್ಳುತ್ತಾನೆ. ಆದರೆ ಕಾವ್ಯವಾಚನ ಮಾಡುವವರಿಗೆ ಎಲ್ಲದಕ್ಕಿಂತಲೂ ಗಾನ–ಕಾವ್ಯಗಾಯನ ಮುಖ್ಯ, ಗಾಯನದ ಅನುಭವದ ಮೂಲಕವಾಗಿಯೆ ಅವರು ಕಾವ್ಯದ ಸ್ವರೂಪವನ್ನು ಗ್ರಹಿಸುತ್ತಾರೆ ; ಇತರರಿಗೆ ಅದನ್ನು ಗ್ರಹಿಸಲು ಸಹಾಯ ಮಾಡುತ್ತಾರೆ.

ಯಾವುದಾದರೂ ಒಂದು ಉನ್ನತ ಪರೀಕ್ಷೆಯಲ್ಲಿ ಒಂದು ಕಾವ್ಯದ ವಿಚಾರವಾಗಿ ನೆರೆದ ಪ್ರಶ್ನೆಗಳಿಗೆ ಯಶಸ್ವಿಯಾಗಿ ಉತ್ತರಗಳನ್ನು ರಚಿಸಿದಾತನಿಗೆ ಕಾವ್ಯಸ್ವರೂಪವು ಚೆನ್ನಾಗಿ ತಿಳಿದಿದೆ ಎಂದು ಹೇಳಬಹುದು ? ಸಾಕಷ್ಟು ತಿಳಿದಿದೆ ಎಂದು ಹೇಳಬಹುದಾಗಲಿ ಕಾವ್ಯಸ್ವರೂಪವನ್ನು ಪೂರ್ತಿಯಾಗಿ ತಿಳಿದುಕೊಳ್ಳಲು ಅಷ್ಟುಮಾತ್ರ ಸಾಲದು. ಕಾವ್ಯವಾಚನವನ್ನೂ ಕೇಳಬೇಕು. ಕಾವ್ಯಗಾಯನ ರೀತಿಯಲ್ಲಿ ಪ್ರಪಂಚದ ಅನುಭವ, ಕಾವ್ಯದ ಅನುಭವ, ಇವೆರಡೂ ಮಿಳಿತವಾಗಿ ಕೇಳುವವರಿಗೆ ಹೊಸ ಅಂಶ ಭಾಸವಾಗುತ್ತದೆ. ಆದುದರಿಂದ ಕಾವ್ಯಗಾಯನವು (ವಾಚನವು) ಮೇಲಿನ ತಿಳಿವಿಗೆ ಬೇರೆ ವಿಧವಾದ ಒಂದು ವಿನೂತನ ಅಂಶವನ್ನು ಕೊಟ್ಟು ಕಾವ್ಯದ ಹಿರಿಮೆಯನ್ನು ಸೂಚಿಸುವುದೂ ಉಂಟು.

ಕನ್ನಡ ಭಾಷೆಯನ್ನು ತಿಳಿಯದೆ ಇರುವವರಿಗೂ ಕಾವ್ಯವಾಚನ ರೀತಿಯಿಂದ ಕನ್ನಡದಲ್ಲಿ ಅಂಥಾಗ್ರಂಥವೊಂದಿದೆ ಎಂಬುದು ಭಾಸವಾಗುತ್ತದೆ. ಕಾವ್ಯವಾಚನದ ರೀತಿಯಲ್ಲಿ ಕಾವ್ಯದ ಅರ್ಥಸಂಪತ್ತಿನ ಬಿಂದು "ರೂಪ" ವು ಒಂದು ಮಿಂಚಾಗಿ ಅವರ ಮನಸ್ಸನ್ನು ತಟ್ಟುತ್ತದೆ.

ಅನೇಕ ವೇಳೆ ಗಮಕವು ಇತಿವೃತ್ತ (ಕಥೆ) ಯನ್ನು ಸ್ಪಷ್ಟಪಡಿಸುತ್ತದೆ. ಇದಕ್ಕೆಕಾರಣ—ಗಮಕಿಯ ಚಮತ್ಕಾರವಿರಬಹುದು ಅಥವಾ ಅವನು ಉಪಯೋಗಿಸುವ ಸಲಕರಣೆ (ರಾಗ, ಇತ್ಯಾದಿ) ಇರಬಹುದು

ಪಂಪ ರನ್ನರ ಭಾಷೆ ಆಧುನಿಕ ಕನ್ನಡವಲ್ಲ, ಆ ಕವಿಪುಂಗವರ ಗ್ರಂಥಗಳನ್ನು ನಾವೇ ಓದಿಕೊಂಡರೆ, ಅನೇಕ ವೇಳೆ ಪದ್ಯದ ಸಾರಾಂಶವೇ ನಮಗೆ ಗೊತ್ತಾಗುತ್ತದೆ. ಆದರೆ ಚತುರನಾದ ಗಮಕಿಯು ಆ ಪದ್ಯಗಳನ್ನು ಸೂಕ್ತ ರೀತಿಯಲ್ಲಿ ವಾಚನಮಾಡಿದರೆ, ಅವುಗಳ ಅರ್ಥವು ನಮ್ಮ ಮನಸ್ಸಿಗೆ ಸುಲಭವಾಗಿ ಹಿಡಿಸುತ್ತದೆ. "ಕುಮಾರ ವ್ಯಾಸನು ಹಾಡಿದನೆಂದರೆ ಕಲಿಯುಗ ದ್ವಾಪರವಾಗುವುದು" ಎಂಬ ವಾಕ್ಯವು ಪ್ರಸಿದ್ಧಿಯಾಗಿದೆ. ಇಲ್ಲಿ ನಾವು ಗಮನಿಸಬೇಕಾದದ್ದು–'ಹಾಡಿದನೆಂದರೆ' ಎಂದಾಗ ಗಮಕಕಲೆಯು ಎಂಥಾ ಪ್ರಪಂಚವನ್ನು ಕಲ್ಪನೆಮಾಡುತ್ತದೆ ಎಂಬುದನ್ನ ಗ್ರಹಿಸಬಹುದು.

ಲಾಕ್ಷಣಿಕರು. ರಸ್ತವೇ ಕಾವ್ಯದ ಔನ್ನತ್ಯ ಎಂದು ಸಾರಿದ ಕಾಲದಲ್ಲಿ ಕವಿಚಕ್ರವರ್ತಿ ರನ್ನನು ತನ್ನ ಕಾವ್ಯ (ಗದಾಯುದ್ಧಂ) ದಲ್ಲಿ ಹೀಗೆ ನುಡಿದಿದ್ದಾನೆ–-

ರಸಮಂ ಭಾವಮು ಮಂ ಕಾ
ಳಸಮಂ ಕುಣಿಕೆಯುಮನ ರು ದು ಕವಿಮಾರ್ಗದೊಳಂ
ಪೊಸದೇಸೆಯ ನುಡಿಗಳೊಳಂ
ಪೊಸೆಯಿಪ ಬಲ್ಮೆಗೆ ಚತುರ್ಮುಖಂ ಕವಿರತ್ನಂ
"1·39"

ರಸ ಪ್ರಧಾನವಾಗಿಯೂ ಭಾವಪೂರ್ಣವಾಗಿಯೂ ಸಂಗೀತ (ಕಾಳಸ) ಯುಕ್ತವಾಗಿಯೂ, ನಾಟ್ಯ (ಕುಣಿಕೆ) ದಿಂದ ಪ್ರದರ್ಶಿಸಲು ಯೋಗ್ಯನಾಗಿಯೂ ದೇಶಿಶಬ್ದ ಯುಕ್ತವಾಪಿಯೂ ತಾನು ಈ ಕಾವ್ಯವನ್ನು ರಚಿಸಿರುವುದಾಗಿ ಹೇಳಿದ್ದಾನೆ. (ರನ್ನ–ಐ. ಬಿ. ಎಚ್. ಪ್ರಕಾಶನ, ಬೆಂಗಳೂರು–9 ಪುಟ 115) ಎಂದ ಮೇಲೆ, ಸಂಗೀತ ಯುಕ್ತ–ಎಂಬುದಕ್ಕೆ ಕಾವ್ಯವಾಚನ ರೀತಿ [ ಸಂಗೀತವನ್ನುಪಯೋಗಿಸಿ ] ಎಂದ ಅರ್ಥಮಾಡುವುದು ಸಹಜವಾಗಿರುತ್ತದೆ ರಸ, ಭಂಗಿ, ಸಂಗೀತ, ನಾಟ್ಯ–ಈ ನಾಲ್ಕುಕ್ಕೂ ಸಮನಾದ ಸ್ಥಾನವನ್ನು ಆ ಕವಿ ಚಕ್ರವರ್ತಿ ಕಲ್ಪಿಸಿರುತ್ತಾನೆ. ಚತುರನಾದ ಗಮಕಿಯು ಇಂಥಾ ಒಂದು ಗಾನದಂಶವನ್ನು ಕೇಳುವವರ ಅನುಭವಕ್ಕೆ ತರಬಲ್ಲ.

ತರುವಾಯ ಮತ್ತೊಂದು ಅಂಶವನ್ನು ಸೂಚಿಸಲು ನನಗೆ ಕುತುಹಲವುಂಟು ಒಮ್ಮೆಕಾವ್ಯವಾಚನವನ್ನು ಕೇಳಿ ಆನಂದ ಪಟ್ಟಮಾನವ ಅದನ್ನು ಮರೆಯಲಾರ. "A thing of beauty is a joy for ever"–- ಎಂದು ನುಡಿದ Keats ಕವಿಯ ವಾಕ್ಯವು

ವಂದ ಹಾಗೆಲ್ಲಾ ಹಿಂದಿನ ನೆನಪಿನ ಸವಿಯು ಒಂದೊಂದು ಸಲ ಹೆಚ್ಚುವುದೂ ಉಂಟು. (ಉ. ದಾ., ಮನ್ಮಥವಿಜಯ ನಾಟಕದಲ್ಲಿ ದಿವಂಗತ ನಾಟಕ ಶಿರೋಮಣಿ ವರದಾಚಾರ್ಯರು ಹಾಡುತ್ತಿದ್ದ ಮಟ್ಟುಗಳ ನೆನಪು)

ಕೇಳುವ ಸಭಿಕರಿಗೆ ಮನಸ್ಸಿನ ದುಗುಡದನಾಶ, ಆನಂದ, ಮನಶ್ಶಾಂತಿ, ಇವುಗಳು ಗಮಕದ ಪ್ರಯೋಜನೆಗಳು ಅಷ್ಟೇ ಅಲ್ಲದೆ, ವಾಚನ ಮಾಡುತ್ತಾ ಮಾಡುತ್ತಾ ಗಮಕಿಯ ಕಾವ್ಯಾನುಭವವೂ ಬೆಳೆಯುತ್ತದೆ. ಇದು ಅನೇಕ ಗಮಕಿಗಳ ಅನುಭವವೆಂದು ಕೇಳಿದ್ದೇನೆ

ಕನ್ನಡವಾಙ್ಮಯದಲ್ಲಿ ಕೆಲವು ಸೊಗಸಾದಗ್ರಂಥಗಳು ಕಾಲದ ಪ್ರಭಾವಕ್ಕೆ ಸಿಕ್ಕಿ, ನಮಗೆ ಈಗ ಸಿಗದಂತೆ, ಮಾಯವಾಗಿವೆ (ಉ. ದಾ , ಪೊನ್ನನ—ರಾಮಾಭ್ಯುದಯಂ). ಆದರೆ ಕಾವ್ಯವಾಚನ ಕಲೆಯು ಇನ್ನೂ ಪ್ರವರ್ಧಮಾನಕ್ಕೆಬಂದರೆ ಇಂಥಾನಾಶವನ್ನು ಅದು ತಡೆಯುತ್ತದೆ ; ಅದನ್ನು ಗೆಲ್ಲಲೂಬಹುದು.

ವಿ. ಸೂ. ಮುಂದಿನ ಲೇಖನಗಳಲ್ಲಿ ಈ ೩ ಅಂಶಗಳನ್ನು ಪರಿಶೀಲಿಸುವ ಉದ್ದೇಶವಿದೆ— ೨. ಕಾವ್ಯವಾಚನದ ಗುರಿ, ೩. ಕಾವ್ಯವಾಚನದ ಮುಖ್ಯಾಂಶಗಳು (ಶ್ರುತಿ, ಲಯ; ನಾದ ಇತ್ಯಾದಿ) ೪. ಕಾವ್ಯವಾಚನ ಮತ್ತು ಶಬ್ದಶಕ್ತಿ.



22 ನೇ ಪುಟದಿಂದ

ಮತ್ತು ಕರುಣಾದಲ್ಲಿ ಬೌದ್ಧಕಾಲೀನ ಘಟನೆಗಳ ಚಿತ್ರಣವಿದೆ. ಒಬ್ಬ ಶೂದ್ರ ತರುಣಿ ಬೌದ್ಧಭಿಕ್ಷುವೊಬ್ಬನನ್ನು ಪ್ರೀತಿಸುವ ಕಥೆ ಚಂಡಾಲಭಿಕ್ಷುಕಿಯದು. ಕರುಣಾದಲ್ಲಿ ಒಬ್ಬ ತರುಣಿ ಬೌದ್ಧಭಿಕ್ಷುವನ್ನು ಪ್ರೀತಿಸುತ್ತಾಳೆ. ಆದರೆ ಅದು ಅವಳ ಒಮ್ಮುಖದ ಪ್ರೀತಿ. ಇಲ್ಲಿ ಬೌದ್ಧಭಿಕ್ಷು ಅವಳ ಪ್ರೀತಿಯ ಕರೆಗೆ ಓಗೊಡುವುದಿಲ್ಲ. ಹೊರತು ಅವಳಿಗೆ ತತ್ವದರ್ಶನ ಮಾಡಿ ನಿರ್ವಾಣದತ್ತ ಕರೆದೊಯ್ಯುತ್ತಾನೆ ಇದರಲ್ಲಿ ಆಸನ್‌ರ ಪ್ರೀತಿಯ ಬಗೆಗಿನ ಭಾವನೆ ಸ್ಫುಟವಾಗುತ್ತದೆ. ಪ್ರೀತಿ ಒಂದು ಉದಾತ್ತವಾದ, ಪವಿತ್ರವಾದ ವಸ್ತುವೆನ್ನುವುದನ್ನು ಅವರು ಇಲ್ಲಿ ಸ್ಪಷ್ಟಪಡಿಸುತ್ತಾರೆ. ಇವರ ಕಾವ್ಯನಾಯಕಿಯರು ಇವರ ಮಾನಸಪುತ್ರಿಯರಾದರೂ ಇವರ ಹೃದಯದ ಸತ್ಯದರ್ಶಕರು. ಆದ್ದರಿಂದ ಇವರಿಗೆ "ಶೆಹಣಾಯಕನ್" (ಪ್ರೇಮಕವಿ) ಎಂಬ ಬಿರುದು ಪ್ರಾಪ್ತವಾಯಿತು.

'ಕರುಣಾ' ನಂತರ ಆಸನ್ ಬಹುಕಾಲ ಬದುಕಲಿಲ್ಲ. ೧೯೨೪ರ ಜನವರಿ ೧೬ ರಂದು ದೋಣಿದುರಂತವೊಂದರಲ್ಲಿ ಇವರು ಮೃತರಾದಾಗ ಮಲೆಯಾಳಿ ಕಾವ್ಯಲೋಕದ ದೊಡ್ಡದೊಂದು ತಾರೆ ಕಣ್ಮರೆಯಾದಂತಾಯಿತು.

# ಶಿವನ ಸೊತ್ತು

ಕಣ್ಣಿಗೆ ಕಾಣುವುದೆಲ್ಲ ಶಿವನ ಸೊತ್ತು ।
ಇದುಮಾತ್ರ ಮಹಾಜ್ಞಾನಿಯೋರ್ವನಿಗೆ ಗೊತ್ತು ॥
ನನ್ನದು ತನ್ನದು ಎಂದು ಪರದಾಡುತಿಹುದು ।
ಉಳಿದವನ ಜನ್ಮಕ್ಕೆ ಅಂಟಿಕೊಂಡಿಹುದು ॥

# ಅ—ಜ್ಞಾನಿ

ಅಜ್ಞಾನಿಗೂ ಸುಜ್ಞಾನಿಗೂ ಏನು ವ್ಯತ್ಯಾಸ ।
ಹೇಳಲಿಕೆ ಉತ್ತರವ ಅದಕೇನು ತ್ರಾಸ ॥
ಉಪ್ಪುಕೊಟ್ಟವನನ್ನು ನೆನೆವ ಮುಪ್ಪಿನತನಕ ।
ತುಪ್ಪ ತಿಂದರು ಮರೆವ ತಿನ್ನಿಸಿದ ಬಳಿಕ ॥ ॥ ॥

— ಹೆಗ್ಗವಾಡಿ ಗುರುಸಿದ್ಧಪ್ಪ.



# ಮಹಾತ್ಮರ ನೆನಪುಗಳು-೭

## ಆತ್ಮೀಯ ಗುಣ

ಪ. ರಾಮಕೃಷ್ಣ ಶಾಸ್ತ್ರಿ

ಗಾಂಧೀ ಸೇವಕ ಸಂಘದ ತೃತೀಯ ಪರಿಷತ್‌ಗಾಗಿ ಗಾಂಧೀಜಿ ಬೆಳಗಾವಿ ಬಳಿಯ ಹುದಲಿಗೆ ಬಂದಿದ್ದರು. ಅಂದು ವಿಪರೀತ ಮಳೆ ಬಂದು ಕಾರ್ಯಕಲಾಪಗಳಿಗೆ ಕೊಂಚ ವ್ಯತ್ಯಯವುಂಟಾಯಿತು. ಕೆಲವರು ಧುರೀಣರು ಗಾಂಧೀಜಿಯವರನ್ನು ಹುದಲಿಯ ಶ್ರೀ ಗಂಗಾಧರ ರಾಯರ ಮನೆಗೆ ಆಹ್ವಾನಿಸಿದಾಗ ಗಾಂಧೀಜಿ ಕೆರಳಿ, "ಪರಿಷತ್ತಿಗೆ ಬಂದ ಬಂಧುಗಳೆಲ್ಲಾ ನೀರಿನಲ್ಲಿ ನಿಂತಿರುವಾಗ ನಾನೊಬ್ಬನೇ ಅಲ್ಲಿಗೆ ಬರಬೇಕೇನು ?" ಎಂದು ತನ್ನವರೆಂಬ ಆತ್ಮೀಯತೆಯಿಂದ ಹೇಳಿದರು.

ಅಂದು ರಾತ್ರಿ ಗಾಂಧೀಜಿ ಚಕ್ಕಡಿಯೊಂದರ ಕೆಳಗೆ ಹುಲ್ಲಿನಮೇಲೆ ಮಲಗಿದರಲ್ಲದೆ ಯಾರಮನೆಗೂ ಹೋಗಲಿಲ್ಲ.

ಹರಿಜನ ಉದ್ಧಾರಕ್ಕಾಗಿ ನಿಧಿ ಸಂಗ್ರಹಿಸಲು ಅವರು ಹೋದಲ್ಲೆಲ್ಲಾ ಹೆಂಗಸರು ಮಕ್ಕಳು ಉಂಗುರ, ಸರ ಬೆಂಡೋಲೆಗಳನ್ನು ಕೂಡ ಮಳೆಯಂತೆ ಅವರ ಮೇಲೆ ಸುರಿವ ದೃಶ್ಯ ಸ್ಮರಣೀಯವಾಗಿತ್ತು. "ಒಡವೆಗಳನ್ನು ಕೊಡಲು ಗಂಡಸರನ್ನು ಕೇಳಬೇಕಿಲ್ಲ, ಒಡವೆ ಎಂದರೆ ಸ್ತ್ರೀಯರ ಅಧಿಕಾರಕ್ಕೊಳಪಟ್ಟದ್ದು," ಎನ್ನುತ್ತಿದ್ದರು ಅವರು.

ಒಂದು ಕಡೆ ಬಾಪೂಜಿಗೆ ಕಾಣಿಕೆ ಕೊಡಲು ಅಸಂಖ್ಯಾತ ಸ್ತ್ರೀಯರು ನೆರೆದಿದ್ದರು. ನೂಕು ನುಗ್ಗಲಿನ ಮಧ್ಯೆಯೆ ಮುದುಕಿಯೊಬ್ಬಳು, "ಬಾಪೂಜಿ, ನನ್ನದು ಒಂದಾಣೆಯಿದೆ. ದಯಮಾಡಿ ತೆಗೆದುಕೊಳ್ಳಿರಿ" ಎಂದು ಕೂಗಿದಳು. ಬಾಪೂಜಿ ಮೊದಲು ಅಲ್ಲಿಗೇ ಓಡಿದರು. ಅವಳು ಒಂದಾಣೆಯನ್ನು ಕೊಟ್ಟು, "ಬಾಪೂ, ನಿಮ್ಮ ಚರಣಗಳನ್ನು ಸ್ಪರ್ಶಿಸಲು ಅನುಮತಿಯಿತ್ತರೆ ಇನ್ನೊಂದಾಣೆ ಕೊಡುತ್ತೇನೆ" ಎಂದಳು.

ಬಾಪೂ ಒಪ್ಪಿದರು. ಹೆಂಗಸು ಅವರ ಕಾಲು ಹಿಡಿದು ಒಂದಾಣೆ ಕೊಟ್ಟಳು. ಕೂಡಲೇ ಬಾಪೂಜಿ "ನನ್ನ ಕಾಲು ಹಿಡಿಯುವ ಹಕ್ಕನ್ನು ಮಾರಾಟ ಮಾಡುತ್ತೇನೆ. ಹರಿಜನ ಫಂಡಿಗೆ ಕಾಣಿಕೆ ಕೊಟ್ಟು ಯಾರು ಬೇಕಾದರೂ ಈ ಕಾಲುಗಳನ್ನು ಕೊಳ್ಳಬಹುದು" ಎಂದು ಕೂಗಿದರು.

"ಶ್ರೀ ಕ್ಷೇತ್ರದಲ್ಲಿ" ೧೩, ೧೪, ಮತ್ತು ೧೫ ರಂದು

# ಸಂಸ್ಕೃತ ಸಮ್ಮೇಳನ

ಸಂಸ್ಕೃತ ಭಾಷೆ ಬಹು ಪುರಾತನ ಹಾಗೂ ಪವಿತ್ರ ಭಾಷೆಯಾಗಿದೆ. ನಮ್ಮ ಸಂಸ್ಕೃತಿಯ ಪ್ರತೀಕವಾದ ವೇದ, ಉಪನಿಷತ್, ಧರ್ಮ, ಇತಿಹಾಸಗಳನ್ನು ಬೋಧಿಸುವ ಗ್ರಂಥಗಳು ಸಂಸ್ಕೃತ ಭಾಷೆಯಲ್ಲಿದ್ದು ಆ ಜ್ಞಾನಸಂಪಾದನೆಗೆ ಸಂಸ್ಕೃತ ಭಾಷೆಯ ಜ್ಞಾನ ಅಗತ್ಯ. ಅದರ ಕಲಿಕೆಗೆ ಪ್ರೋತ್ಸಾಹ ಪ್ರಚಾರಗಳು ಅತ್ಯಗತ್ಯ. ಈ ದಿಸೆಯಲ್ಲಿ ಅಖಿಲ ಕರ್ನಾಟಕ ಸಂಸ್ಕೃತ ಪರಿಷತ್ತಿನ ಆಶ್ರಯದಲ್ಲಿ, 1978 ನೆಯ ಅಕ್ಟೋಬರ್ 13, 14 ಮತ್ತು 15 ರಂದು ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ಅಖಿಲ ಕರ್ನಾಟಕ ಸಂಸ್ಕೃತ ಸಮ್ಮೇಳನವನ್ನು ಏರ್ಪಡಿಸಿದೆ.

ದಿನಾಂಕ 13-10-78 ರಂದು ಸಂಜೆ 5-00 ಉದ್ಘಾಟನೆಯಿಂದ 15-10-78 ರಂದು ಸಂಜೆ ಸಮಾರೋಪದೊಂದಿಗೆ, ಈ ನಡುವೆ 7 ಅಧಿವೇಶನಗಳು ಜರುಗಲಿವೆ. ಶಿಕ್ಷಣ ಗೋಷ್ಠಿ, ಸಂಘಟನಾ ಗೋಷ್ಠಿ, ಸಂಸ್ಕೃತ ಸ್ಥಾನಮಾನ ವಿಚಾರಗೋಷ್ಠಿ, ಸಾಹಿತ್ಯಗೋಷ್ಠಿ, ಶಾಸ್ತ್ರಗೋಷ್ಠಿ ಮಹಿಳಾ ಗೋಷ್ಠಿ ಮತ್ತು ಕರ್ನಾಟಕದಲ್ಲಿ ಜ್ಞಾನ ಪೀಠ ಪ್ರಶಸ್ತಿ ಪಡೆದ ಸಾಹಿತಿಗಳಿಗೆ, ರಾಷ್ಟ್ರಪತಿಗಳಿಂದ ಪುರಸ್ಕೃತವಾದ ಸಂಸ್ಕೃತಜ್ಞರು, ಸಂಸ್ಕೃತ ಕ್ಷೇತ್ರದಲ್ಲಿ ವಿಶಿಷ್ಟ ಸೇವೆಸಲ್ಲಿಸಿದ ಮಹನೀಯರುಗಳನ್ನು ಗೌರವಿಸಲಾಗುತ್ತದೆ. ಪ್ರಾಚೀನ ಹಸ್ತಪ್ರತಿಗಳು ಮತ್ತು ಆಧುನಿಕ ಸಾಹಿತ್ಯ ಪ್ರದರ್ಶನ ಸಹ ಇದೆ. ಪ್ರತಿದಿನ ಸಂಜೆ ಆಕರ್ಷಕ ಮನೋರಂಜನೆಯ ಕಾರ್ಯಕ್ರಮಗಳನ್ನು ಏರ್ಪಡಿಸಲಾಗಿದೆ. ಇದೇ ಸಂದರ್ಭದಲ್ಲಿ ಸಂಸ್ಕೃತ ಲೇಖಕರನ್ನು ಉತ್ತೇಜಿಸುವ ದೃಷ್ಟಿಯಿಂದ ಒಂದು ಸಮಸ್ಯಾ ಪೂರ್ತಿಸ್ಪರ್ಧೆಯನ್ನು ಏರ್ಪಡಿಸಲಾಗಿದೆ. "ಪ್ರವರ್ತತಾಂ ಸಂಸ್ಕೃತ ಭಾಗ್ಯ ಚಕ್ರಮ್" ಎಂಬ ಸಮಸ್ಯೆಯನ್ನು ಪೂರ್ತಿ ಮಾಡಿ ಅಕ್ಟೋಬರ್ ಒಂದನೇ ತಾರೀಖಿನೊಳಗಾಗಿ ಬೆಂಗಳೂರಿನ ಕಾರ್ಯಾಲಯದ ವಿಳಾಸಕ್ಕೆ ಕಳುಹಿಸಿಕೊಡಬೇಕಾಗಿ ಕೋರಲಾಗಿದೆ.

ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ನಡೆಯುವ ಸಮ್ಮೇಳನದ ಅಧ್ಯಕ್ಷತೆಯನ್ನು ಕರ್ನಾಟಕ ವಿಶ್ವವಿದ್ಯಾನಿಲಯದ ಸಂಸ್ಕೃತ ವಿಭಾಗದ ಮುಖ್ಯಸ್ಥರೂ ಮೊನ್ನೆತಾನೆ ರಾಷ್ಟ್ರಪ್ರಶಸ್ತಿ ವಿಜೇತರೂ ಆದ ಡಾ|| ಕೆ. ಕೃಷ್ಣಮೂರ್ತಿಯವರು ವಹಿಸುವವರಿದ್ದಾರೆ. ಸಮ್ಮೇಳನದ ಸ್ವಾಗತ ಸಮಿತಿಯ ಅಧ್ಯಕ್ಷರು ಡಾ|| ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು. ಈ ಸಮ್ಮೇಳನದಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಮಂತ್ರಿವರ್ಯರೂ, ಹಿರಿಯ ಅಧಿಕಾರಿಗಳು ಸಂಸ್ಕೃತ ಪ್ರೇಮಿಗಳು ಹಿತೈಷಿಗಳು ಭಾಗವಹಿಸುವವರಿದ್ದಾರೆ.

ಈ ಸಮ್ಮೇಳನಕ್ಕೆ ಬರುವ ಪ್ರತಿನಿಧಿಗಳಿಗೆ ಶ್ರೀ ಕ್ಷೇತ್ರದ ವತಿಯಿಂದ ಉಚಿತ ಊಟ ವಸತಿ ಏರ್ಪಡಿಸಿದೆ. ಪ್ರತಿನಿಧಿ ಶುಲ್ಕ 10ರೂ. ಮತ್ತು ಸ್ವಾಗತ ಸಮಿತಿ ಶುಲ್ಕ 100ರೂ. ಭಾಷಾಭಿಮಾನಿಗಳು ಸಮಸ್ಯಾಪೂರ್ತಿಯನ್ನೂ ತಾವು ರಚಿಸಿರುವ ಸಂಸ್ಕೃತ ಗ್ರಂಥಗಳನ್ನು ಸಮ್ಮೇಳನದ ಕಾರ್ಯಾಲಯ, ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ಕಾಲೇಜು, ಸಿದ್ಧಗಂಗಾ ಕ್ಷೇತ್ರ, ಕ್ಯಾತ್ಸಂದ್ರ ಇವರಿಗೆ ಕಳುಹಿಸ ಬೇಕೆಂದು ಕೋರಲಾಗಿದೆ.

"SIDDAGANGA" Monthly, Sree Siddaganga Mutt. KRN Q-9
Registered with the Registrar of News papers for India under No. 17139/69



ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ.